KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೧೧, (ಚೈತ್ರ ೧೭, ಶಕ ವರ್ಷ ೧೯೩೩) | ಸಂಚಿಕೆ ೧೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಕೋಣನಮನೆ ಗ್ರಾಮದ ಹತ್ತಿರ ಹಳ್ಳಕ್ಕೆ ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ನಯೋಕಾ 2009 ದಿನಾಂಕ: 06–01–2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ತಾಂ.ಸ–3/ಸಇಂ.8/ಶಿವಮೊಗ್ಗ/ಇ–ಟೆಂಡರ್/2010–11/2918 ದಿನಾಂಕ: 11–10–2010.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ: 28.10.2010 ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/08–09/3112.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್.–15 ರಲ್ಲಿ ರೂ. 15045.45 ಲಕ್ಷ ಅಂದಾಜು ಮೊತ್ತದ 385 ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಪೈಕಿ ರೂ. 145.00 ಲಕ್ಷ ಮೊತ್ತದ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಕೋಣನಮನೆ ಗ್ರಾಮದ ಹತ್ತಿರ ಹಳ್ಳಕ್ಕೆ ಹೊಸಕೆರೆ ನಿಮಾಣ ಕಾಮಗಾರಿಯು ಸೇರಿದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ನೊಂದಣಿ 148/2009–10 ರಲ್ಲಿ ಅಂದಾಜಿಗೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 22.05.2010 |
| ವಿಜಯ ಕರ್ನಾಟಕ ದಿನ ಪತ್ರಿಕೆ | 24.06.2010 |

ಟೆಂಡರ್‌ನ ತಾಂತ್ರಿಕ ಬಿಡ್‌ಅನ್ನು ದಿನಾಂಕ 19.07.2010 ರಂದು ತೆರೆದು ಪರಿಶೀಲಿಸಲಾಗಿ, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂವರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ನ್ನು 01.09.2010 ರಂದು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 99,17,982/– |
| ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 101,78,551/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | 114,77,892/– | 15.72 ಹೆಚ್ಚು | 12.77 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ. ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.77ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 14.10.2010 ರಂದು, ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಪರಿಶೀಲಿಸಲಾಗಿತ್ತು. ಗುತ್ತಿಗೆದಾರರು ನಂತರ ದಿನಾಂಕ 01.12.2010 ರಂದು ಪತ್ರವನ್ನು ನೀಡಿ ಅದರಲ್ಲಿ ಟೆಂಡರಿನ ಚಾಲ್ತಿ ಅವಧಿಯನ್ನು ವಿಸ್ತರಿಸುತ್ತಾ, ಅವರು ನಮೂದಿಸಿರುವ ದರಗಳಲ್ಲಿಯೇ ಟೆಂಡರನ್ನು ಅನುಮೋದಿಸುವಂತೆ ಕೋರಿರುತ್ತಾರೆ. ಗುತ್ತಿಗೆದಾರರ ಮನವಿಯನ್ನು ಪರಿಶೀಲಿಸಿ, ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 11 ಹೊಕೆನಿ 2010, ಬೆಂಗಳೂರು, ದಿನಾಂಕ: 01 ನೇ ಫೆಬ್ರವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಕೋಣನಮನೆ ಗ್ರಾಮದ ಹತ್ತಿರ ಹಳ್ಳಕ್ಕೆ ಹೊಸಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 101.78,551/–ಗಳ ಮೇಲೆ ಶೇ. 12.77 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 114.77,892/–ಗಳಿಗೆ (ರೂ. ಒಂದು ಕೋಟಿ ಹದಿನಾಲ್ಕು ಲಕ್ಷ ಎಪ್ಪತ್ತೇಳು ಸಾವಿರದ ಎಂಟುನೂರ ತೊಂಬತ್ತೆರಡು) ಕಾಮಗಾರಿಯನ್ನು ಶ್ರೀ ಜಿ. ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 376

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸೇವೆಯಲ್ಲಿದ್ದು ನಂತರ ಕರ್ನಾಟಕ ಹಾಲು ಮಹಾಮಂಡಳದ ಅಧೀನದಲ್ಲಿ ಬರುವ ಹಾಲು ಒಕ್ಕೂಟಗಳಲ್ಲಿ ವಿಲೀನಗೊಂಡ ನೌಕರರಿಗೆ ಪ್ರೋರೇಟಾ ಪಿಂಚಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 152 ಕೆಡಿಸಿ 95 ದಿನಾಂಕ: 01–02–2000.
2. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಪಇ/ಪ್ರೋರೇಟಾ ಪಿಂಚಣಿ/ಹೆಚ್.ಆರ್.ಹೆಚ್/2007–08 ದಿನಾಂಕ: 07–07–2008.
3. ಪತ್ರ ಸಂಖ್ಯೆ: ಆಪಇ/ಸಿ7/ದಕಹಾಒ–1 ರಿಂದ 4/2008–09 ದಿನಾಂಕ: 07–07–2008.
4. ಪತ್ರ ಸಂಖ್ಯೆ: ಆಪಇ/ಸಿ7/ಕೆಎಂಎಫ್/2007–08/ಭಾಗ–2 ದಿನಾಂಕ: 26–08–2009.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ 01–02–2000 ದ ಸರ್ಕಾರಿ ಆದೇಶದಲ್ಲಿ, ಕರ್ನಾಟಕ ಹಾಲು ಮಹಾಮಂಡಳಿ ಹಾಗೂ ಅದರ ಅಧೀನದಲ್ಲಿ ಬರುವ ಜಿಲ್ಲಾ ಹಾಲು ಒಕ್ಕೂಟದಲ್ಲಿ ಖಾಯಂ ಆಗಿ ವಿಲೀನಗೊಳ್ಳಲು ಇಚ್ಛಿಸಿ ಅಂತೆಯೇ ಅಭಿಮತ ನೀಡಿದ ಒಟ್ಟು 31 ಮಂದಿ ಹಿಂದಿನ ಸರ್ಕಾರಿ ಡೈರಿ ನೌಕರರನ್ನು ಅವರು ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕರ್ನಾಟಕ ಹಾಲು ಮಹಾಮಂಡಳಿ/ಜಿಲ್ಲಾ ಹಾಲು ಒಕ್ಕೂಟಗಳಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಕ್ರಮಾಂಕ (2), (3) ಮತ್ತು (4) ರಲ್ಲಿ ಓದಲಾದ ದಿನಾಂಕ 07–07–2008 ಹಾಗೂ 26–08–2009 ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು, ಕರ್ನಾಟಕ ಸರ್ಕಾರದ ಸೇವೆಯಲ್ಲಿದ್ದು, ನಂತರ ಕರ್ನಾಟಕ ಹಾಲು ಉತ್ಪಾದಕರ ಒಕ್ಕೂಟದ ಸೇವೆಗೆ ಅಭಿಮತ ನೀಡಿ ವಿಲೀನಗೊಂಡ ಈ ಕೆಳಕಾಣಿಸಿದ ನೌಕರರಿಗೆ, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 70 ಎಸ್‌ಆರ್‌ಎಸ್ 77 ದಿನಾಂಕ 27–10–1977 ರ ಪ್ರಕಾರ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ–235(ಎ) ರನ್ವಯ ಪ್ರೋರೇಟಾ ಪಿಂಚಣಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

| ಕ್ರಮ ಸಂಖ್ಯೆ | ನೌಕರರ ಹೆಸರು ಶ್ರೀ/ಶ್ರೀಮತಿ | ಕಾರ್ಯನಿರ್ವಹಿಸಿದ ಒಕ್ಕೂಟ |
|---|---|---|
| 1 | ಎ.ಬಿ. ಪಾಗೆವಾಲೆ | ಬೆಳಗಾವಿ ಹಾಲು ಒಕ್ಕೂಟ |
| 2 | ಎಂ. ಅರುಣಾಕರ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 3 | ಹೆಚ್.ಆರ್. ಹರಿಶ್ಚಂದ್ರ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 4 | ಬಿ.ಕೆ. ಜಯ | ದಕ್ಷಿಣ ಕನ್ನಡ ಹಾಲು ಒಕ್ಕೂಟ |

| | | |
|---|---|---|
| 5 | ಬಿ. ರಘುರಾಮಶೆಟ್ಟಿ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 6 | ಕೆ. ರಘುರಾಮರಾವ್ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 7 | ಕೆ. ಕಮಲಾಕ್ಷ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 8 | ಕೆ.ಎನ್. ಬಾಲಸುಬ್ರಮಣ್ಣ | ಶಿವಮೊಗ್ಗ ಹಾಲು ಒಕ್ಕೂಟ |
| 9 | ಕೆ. ಮರಿಲಿಂಗಯ್ಯ | ಶಿವಮೊಗ್ಗ ಹಾಲು ಒಕ್ಕೂಟ |

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 91 ಕಹಾಮ 2008, ಬೆಂಗಳೂರು, ದಿನಾಂಕ : 29ನೇ ಜನವರಿ 2011.**

ಪ್ರಸ್ತಾವನೆಯಲ್ಲಿ ಕಾಣಿಸಲಾದ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಹಿಂದಿನ ಸರ್ಕಾರಿ ಡೈರಿಗಳಲ್ಲಿ ನೇಮಕಗೊಂಡು ನಂತರ ಕರ್ನಾಟಕ ಹಾಲು ಮಹಾಮಂಡಳಿಯ ಅಧೀನದಲ್ಲಿ ಬರುವ ಹಾಲು ಒಕ್ಕೂಟಗಳಿಗೆ, ಅಭಿಮತ ನೀಡಿ ವಿಲೀನಗೊಂಡ ಈ ಕೆಳಕಂಡ ಡೈರಿ ನೌಕರರಿಗೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–235(ಎ) ಅನ್ವಯ ಹಾಗೂ ಅಲ್ಲಿನ ನಿಬಂಧನೆಗಳಿಗೊಳಪಟ್ಟು ಪ್ರೋರೇಟಾ ಪಿಂಚಣಿ ಮಂಜೂರು ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ನೌಕರರ ಹೆಸರು ಶ್ರೀ/ಶ್ರೀಮತಿ | ಕಾರ್ಯನಿರ್ವಹಿಸಿದ ಒಕ್ಕೂಟ |
|---|---|---|
| 1 | ಎ.ಬಿ. ಪಾಗೆವಾಲೆ | ಬೆಳಗಾವಿ ಹಾಲು ಒಕ್ಕೂಟ |
| 2 | ಎಂ. ಅರುಣಾಕರ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 3 | ಹೆಚ್.ಆರ್. ಹರಿಶ್ಚಂದ್ರ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 4 | ಬಿ.ಕೆ. ಜಯ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 5 | ಬಿ. ರಘುರಾಮಶೆಟ್ಟಿ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 6 | ಕೆ. ರಘುರಾಮರಾವ್ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 7 | ಕೆ. ಕಮಲಾಕ್ಷ | ದಕ್ಷಿಣ ಕನ್ನಡ ಹಾಲು ಒಕ್ಕೂಟ |
| 8 | ಕೆ.ಎನ್. ಬಾಲಸುಬ್ರಮಣ್ಣ | ಶಿವಮೊಗ್ಗ ಹಾಲು ಒಕ್ಕೂಟ |
| 9 | ಕೆ. ಮರಿಲಿಂಗಯ್ಯ | ಶಿವಮೊಗ್ಗ ಹಾಲು ಒಕ್ಕೂಟ |

ಸದರಿ ನಿವೃತ್ತ ನೌಕರರು ನಿಯಮಾನುಸಾರ ಸರ್ಕಾರಿ ನೌಕರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಯು ಹತ್ತು ವರ್ಷಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ಅದರಂತೆ ಮೇಲ್ಕಾಣಿಸಿದ 9 ಮಂದಿ ನಿವೃತ್ತ ಡೈರಿ ನೌಕರರು, ಸರ್ಕಾರಿ ನೌಕರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಗೆ ಅನುಗುಣವಾಗಿ ಲೆಕ್ಕ ಹಾಕಿ, ಆ ಅವಧಿಗೆ ಮಾತ್ರ ಸೀಮಿತಗೊಂಡಂತೆ ಪ್ರೋರೇಟಾ ಪಿಂಚಣಿ ಮಂಜೂರು ಮಾಡತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 409 ವೆಚ್ಚ–4/2008 ದಿನಾಂಕ 04–11–2010 ರಲ್ಲಿ ಆರ್ಥಿಕ ಇಲಾಖೆಯು ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ. ಆರ್. 377 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.
(ಪಶುಸಂಗೋಪನೆ)

## ಒಳಾಡಳಿತ ಸಚಿವಾಲಯ

## ಸೇರ್ಪಡೆ ಆದೇಶ

ಸಂಖ್ಯೆ: ಒಇ 60 ಪೊಸಇ 2009 ಬೆಂಗಳೂರು, ದಿನಾಂಕ 28ನೇ ಜನವರಿ 2011.

1) ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 ದಿನಾಂಕ 24–08–2009 ರಂದು ಹೊರಡಿಸಿರುವ ಪೊಲೀಸ್ ಸಿಬ್ಬಂದಿ ಮಂಡಳಿ ಸ್ಥಾಪನೆ ಕುರಿತ ಆದೇಶ ಭಾಗದ ಕಂಡಿಕೆ–2 "ಮಂಡಳಿಯ ಪ್ರಕಾರ್ಯಗಳು" ಇದರ ಕಂಡಿಗೆ–2 (ಡಿ) ನಂತರ ಹೊಸದಾಗಿ (ಇ) ಅನ್ನು ಈ ಕೆಳಕಂಡಂತೆ ಅಳವಡಿಸಿ ಆದೇಶಿಸಿದೆ.

"ಪೊಲೀಸ್ ಅಧಿಕಾರಿ/ಸಿಬ್ಬಂದಿಗಳನ್ನು ದೂರುಗಳ ಮೇಲೆ ಮಾಡುವ ವರ್ಗಾವಣೆಗಳ ಪ್ರಕರಣಗಳನ್ನು ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಗಣಿಸಿ ಈ ಬಗ್ಗೆ ತೆಗೆದುಕೊಂಡ ಕ್ರಮವನ್ನು ಸರ್ಕಾರಕ್ಕೆ ವರದಿ ಮಾಡುವುದು"

2) ಪೊಲೀಸ್ ಸಿಬ್ಬಂದಿ ಮಂಡಳಿ ಸ್ಥಾಪಿಸಿರುವ ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 ದಿನಾಂಕ 24–08–2009 ರ ಆದೇಶ ಭಾಗದ ಕಂಡಿಕೆ–4 ರ ಕೊನೆಯ ವಾಕ್ಯದ ನಂತರ ಹೆಚ್ಚುವರಿಯಾಗಿ ಈ ಕೆಳಕಂಡಂತೆ ಅಳವಡಿಸಿ ಆದೇಶಿಸಿದೆ.

"ಸಾಮಾನ್ಯ ನಿಯಮವಾಗಿ, ಕಾರ್ಯಾಚರಣೆಯ ಕರ್ತವ್ಯದಲ್ಲಿರುವ ಪೊಲೀಸ್ ಅಧಿಕಾರಿಗಳಾದ ಜಿಲ್ಲಾ ಪ್ರಭಾರ ಹೊಂದಿರುವ ಪೊಲೀಸ್ ಅಧೀಕ್ಷಕರು, ಹೆಚ್ಚುವರಿ ಪೊಲೀಸ್ ಅಧೀಕ್ಷಕರನ್ನು ಒಳಗೊಂಡಂತೆ, ವಲಯ ಪ್ರಭಾರದಲ್ಲಿರುವ ಪೊಲೀಸ್ ಮಹಾ ನಿರೀಕ್ಷಕರುಗಳು, ಕನಿಷ್ಠ ಎರಡು ವರ್ಷಗಳ ಪದಾವಧಿಯನ್ನು ಹೊಂದಿರತಕ್ಕದ್ದು. ಆದರೆ ಮುಖ್ಯಮಂತ್ರಿಗಳು ತಮ್ಮ ವಿವೇಚನೆಯಲ್ಲಿ, ಕಾರಣಗಳನ್ನು ಲಿಖಿತವಾಗಿ ದಾಖಲಿಸಿ ಮೇಲ್ಕಂಡ ಪ್ರವರ್ಗದ ಅಧಿಕಾರಿಯನ್ನು ಎರಡು ವರ್ಷದ ಅವಧಿಯೊಳಗೆ ವರ್ಗಾವಣೆ ಮಾಡಬಹುದಾಗಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ. ಆರ್. 378 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಸುಧಾರಣೆಗಳು-'ಪೊಲೀಸ್ ದೂರುಗಳ ಪ್ರಾಧಿಕಾರ' ದ ರಚನೆ - ಕುರಿತು.

**ಓದಲಾಗಿದೆ :**
1. ಶ್ರೀ ಪ್ರಕಾಶ್ ಸಿಂಗ್ ಮತ್ತು ಇತರರು-ವಿರುದ್ಧ-ಭಾರತ ಒಕ್ಕೂಟ ಮತ್ತು ಇತರರು ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 310/1996 ದಿನಾಂಕ 22-09-2006ರ ಸಂಬಂಧದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪು.
2. ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರು, ಬೆಂಗಳೂರು-ಇವರ ಪತ್ರ ಸಂಖ್ಯೆ ಕಾನೂನು (1) 52/2005, ದಿನಾಂಕ 19-02-2009.
3. ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರ ಪತ್ರ ಸಂಖ್ಯೆ ಕಾನೂನು (1) 52/2005 ದಿನಾಂಕ 10-09-2009.

**ಪ್ರಸ್ತಾವನೆ :**

ರಿಟ್ ಅರ್ಜಿ (ಸಿವಿಲ್) ಸಂಖ್ಯೆ 310/1996ರಲ್ಲಿ ಶ್ರೀ ಪ್ರಕಾಶ್ ಸಿಂಗ್ ಮತ್ತು ಇತರರು ಸಲ್ಲಿಸಿದ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಂಬಂಧದಲ್ಲಿ, ಸರ್ವೋಚ್ಚ ನ್ಯಾಯಾಲಯವು ರಾಷ್ಟ್ರೀಯ ಪೊಲೀಸು ಆಯೋಗದಿಂದ ಮೊದಲ್ಗೊಂಡು ಹಲವಾರು ಆಯೋಗಗಳು ಪೊಲೀಸ್ ವ್ಯವಸ್ಥೆಯಲ್ಲಿ ಸುಧಾರಣೆಗಾಗಿ ಶಿಫಾರಸುಗಳನ್ನು ಮಾಡಿದ್ದರೂ ಅವುಗಳನ್ನು ಕೇಂದ್ರ ಸರ್ಕಾರವಾಗಲೀ ಅಥವಾ ರಾಜ್ಯ ಸರ್ಕಾರಗಳಾಗಲೀ ಅನುಷ್ಠಾನಗೊಳಿಸಿರುವುದಿಲ್ಲವೆಂದು ಅಭಿಪ್ರಾಯಪಟ್ಟಿದೆ. ನ್ಯಾಯಾಲಯವು ಸೂಕ್ತ ಕಾನೂನುಗಳ ರಚನೆಯನ್ನು ಬಾಕಿಯಿರಿಸಿ ಅನುಸರಣೆಗಾಗಿ ರಾಜ್ಯ ಸರ್ಕಾರಗಳಿಗೆ ಆರು ನಿರ್ದೇಶನಗಳನ್ನು ನೀಡಿದ್ದು ಅವುಗಳಲ್ಲಿ ರಾಜ್ಯ ಸರ್ಕಾರಗಳು ಪೊಲೀಸ್ ಅಧಿಕಾರಿಗಳ ವಿರುದ್ಧ ಬರುವ ದೂರುಗಳನ್ನು ಪರಿಶೀಲಿಸುವುದಕ್ಕಾಗಿ ರಾಜ್ಯಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಪೊಲೀಸ್ ದೂರುಗಳ ಪ್ರಾಧಿಕಾರವನ್ನು ರಚಿಸಬೇಕೆಂಬುದು ಒಂದಾಗಿರುತ್ತದೆ.

ಘನ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಅಳವಡಿಸಿಕೊಳ್ಳುವ ಮೂಲಕ ಸಮಗ್ರ ಪೊಲೀಸ್ ಅಧಿನಿಯಮವನ್ನು ಸಿದ್ಧಪಡಿಸುವುದಕ್ಕಾಗಿ ಅಂದಿನ ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರಾದ ಶ್ರೀ ಆರ್. ಶ್ರೀಕುಮಾರ್‌ರವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಯು ಉದ್ದೇಶಿತ ನೂತನ ಕರ್ನಾಟಕ ಪೊಲೀಸ್ ಅಧಿನಿಯಮದ ಕರಡನ್ನು ಸಲ್ಲಿಸಿತು. ಅದರ ನಂತರ ದಿನಾಂಕ 16-02-2009 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಿದ್ದು ಅದರಲ್ಲಿ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಿಸಿದ ಸ್ಥಿತಿಯನ್ನು ಮತ್ತು ಉದ್ದೇಶಿತ ನೂತನ ಕರ್ನಾಟಕ ಪೊಲೀಸ್ ಅಧಿನಿಯಮದ ಕರಡನ್ನು ಪರಿಶೀಲಿಸುವುದಕ್ಕಾಗಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿ ಮತ್ತು ರಾಜ್ಯ ಕಾನೂನು ಮತ್ತು ಆರ್ಥಿಕ ಇಲಾಖೆಗಳ ಪ್ರತಿನಿಧಿಗಳು ಸಹ ಭಾಗವಹಿಸಿದ್ದರು. ಈ ಸಭೆಯಲ್ಲಿ ವಿವಿಧ ಪರ್ಯಾಯ ಕ್ರಮಗಳ ಬಗ್ಗೆ ಸವಿವರವಾಗಿ ಚರ್ಚಿಸಲಾಯಿತು ಮತ್ತು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಕರ್ನಾಟಕ ಪೊಲೀಸ್ ಅಧಿನಿಯಮಕ್ಕೆ ಸಮಗ್ರ ತಿದ್ದುಪಡಿಗಳನ್ನು ಮಾಡುವುದನ್ನು ಅಥವಾ ನೂತನ ಕರ್ನಾಟಕ ಪೊಲೀಸ್ ಅಧಿನಿಯಮವನ್ನು ಅಧಿನಿಯಮಿತಗೊಳಿಸುವುದನ್ನು ಬಾಕಿಯಿರಿಸಿ ಸರ್ವೋಚ್ಚ ನ್ಯಾಯಾಲಯದ ಆರು ನಿರ್ದೇಶನಗಳ ಸಂಬಂಧದಲ್ಲಿ ಕಾರ್ಯಕಾರಿ ಆದೇಶಗಳನ್ನು ಹೊರಡಿಸಲು ನಿರ್ಧರಿಸಲಾಯಿತು.

ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರು, ಬೆಂಗಳೂರು - ಇವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ರಾಜ್ಯಮಟ್ಟದ ಪೊಲೀಸ್ ದೂರು ಪ್ರಾಧಿಕಾರವನ್ನು ರಚಿಸುವುದಕ್ಕಾಗಿ ಪ್ರಸ್ತಾವನೆ ಕಳುಹಿಸಿರುತ್ತಾರೆ ಮತ್ತು ಮೇಲೆ (3)ರಲ್ಲಿ ಓದಲಾದ ಪತ್ರದ ಪ್ರಕಾರ ಜಿಲ್ಲೆಯ ಸಂಬಂಧಪಟ್ಟ ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿ ಜಿಲ್ಲಾಮಟ್ಟದ ಸಮಿತಿ ರಚನೆಗಾಗಿ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಈ ವಿಷಯವನ್ನು ಸರ್ಕಾರದಿಂದ ವಿವರವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 59 ಪೊಸಇ 2009, ಬೆಂಗಳೂರು, ದಿನಾಂಕ : 3ನೇ ಡಿಸೆಂಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳನುಸಾರ, ಈ ಕೂಡಲೇ ಜಾರಿಗೆ ಬರುವಂತೆ ಪೂರ್ಣಾವಧಿ ಆಧಾರದ ಮೇಲೆ ರಾಜ್ಯಮಟ್ಟದಲ್ಲಿ ಮತ್ತು ಜಿಲ್ಲಾಮಟ್ಟದಲ್ಲಿ ಪೊಲೀಸ್ ದೂರುಗಳ ಪ್ರಾಧಿಕಾರದ ರಚನೆಗಾಗಿ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

**I. ರಾಜ್ಯ ಪೊಲೀಸ್ ದೂರುಗಳ ಪ್ರಾಧಿಕಾರ:**

**(1) ರಚನೆ**

1. ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು - ಅಧ್ಯಕ್ಷರು

ಸರ್ಕಾರವು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯವರು ಸೂಚಿಸಿದ ನ್ಯಾಯಾಧೀಶರ ಹೆಸರುಗಳ ಪಟ್ಟಿಯಿಂದ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡತಕ್ಕದ್ದು.

2. ಇಬ್ಬರು ವ್ಯಕ್ತಿಗಳು - ಸದಸ್ಯರು

(ಒಬ್ಬರು ಸಿವಿಲ್ ಸೇವೆಯಿಂದ ಮತ್ತೊಬ್ಬರು ನಾಗರಿಕ ಸಮಾಜದಿಂದ)

ರಾಜ್ಯ ಮಾನವ ಹಕ್ಕುಗಳ ಆಯೋಗ ಅಥವಾ ಲೋಕಾಯುಕ್ತ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಪಡೆದುಕೊಂಡ ಮೂವರು ಸದಸ್ಯರುಗಳ ಎರಡು ಹೆಸರುಗಳ ಪಟ್ಟಿಯಿಂದ ಸರ್ಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಅಥವಾ ಮೇಲ್ಪಟ್ಟ ದರ್ಜೆಯ ನಿವೃತ್ತ ಸಿವಿಲ್ ಸೇವಾ ಅಧಿಕಾರಿಗಳ ಪೈಕಿ ಒಬ್ಬರನ್ನು ಮತ್ತು ಮೂವರು ಸದಸ್ಯರುಗಳ ಇನ್ನೊಂದು ಪಟ್ಟಿಯಿಂದ ನಾಗರಿಕ ಸಮಾಜದ ವ್ಯಕ್ತಿಗಳ ಪೈಕಿ ಒಬ್ಬರನ್ನು ಸದಸ್ಯರನ್ನಾಗಿ ಆಯ್ಕೆ ಮಾಡತಕ್ಕದ್ದು.

**ಪರಂತು ಒಬ್ಬ ವ್ಯಕ್ತಿಯು.-**

1) ಯಾವುದೇ ರಾಜಕೀಯ ಪಕ್ಷದೊಂದಿಗೆ ಅಥವಾ ಪಕ್ಷಗಳೊಂದಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆತನು ಸ್ವತಃ ಸಹವರ್ತಿಯಾಗಿದ್ದರೆ;

2) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ನೈತಿಕ ಅಧಃಪತನವನ್ನು ಒಳಗೊಂಡಿರುವ ಒಂದು ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾಗಿದ್ದರೆ ಮತ್ತು ಕಾರಾವಾಸ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

3) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ
4) ಅಸ್ವಸ್ಥಚಿತ್ತನಾಗಿದ್ದರೆ ಮತ್ತು ಸಕ್ಷಮ ನ್ಯಾಯಾಲಯವು ಹಾಗೆಂದು ಘೋಷಿಸಿದ್ದರೆ; ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ನಿಗಮ ನಿಕಾಯವಾಗಿದ್ದರೆ; ಅಥವಾ
5) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಒಬ್ಬ ಸದಸ್ಯನಾಗಿ ತನ್ನ ಪ್ರಕಾರ್ಯಗಳ ನಿರ್ವಹಣೆಗೆ ಪ್ರತಿಕೂಲ ಪರಿಣಾಮ ಉಂಟುಮಾಡುವ ಸಂಭವವಿರುವಂಥ ಹಣಕಾಸು ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ
6) ರಾಜ್ಯ ಸರ್ಕಾರವು ಗೊತ್ತುಪಡಿಸಬಹುದಾದಂಥ ಇತರ ಅನರ್ಹತೆಗಳನ್ನು ಹೊಂದಿದ್ದರೆ. – ಅವನು ಸದಸ್ಯನಾಗಿ ನೇಮಕಗೊಳ್ಳಲು ಅನರ್ಹನಾಗಿರತಕ್ಕದ್ದು.

ರಾಜ್ಯ ದೂರುಗಳ ಪ್ರಾಧಿಕಾರದ ಪ್ರತಿಯೊಬ್ಬ ಸದಸ್ಯನು 3 ವರ್ಷಗಳವರೆಗೆ ಪದಾವಧಿಯಲ್ಲಿ ಇರತಕ್ಕದ್ದು.

ಪ್ರಾಧಿಕಾರಕ್ಕೆ ಸಹಾಯಕವಾಗಿ ಈ ಮುಂದಿನ ಹುದ್ದೆಗಳನ್ನು ಸೃಜಿಸಲಾಗಿದೆ.

| | | | |
|---|---|---|---|
| 1) | ಕಚೇರಿ ಅಧೀಕ್ಷಕ | – | 1 |
| 2) | ಪ್ರಥಮ ದರ್ಜೆ ಸಹಾಯಕರು | – | 1 |
| 3) | ದ್ವಿ.ದ.ಸ. | – | 2 |
| 4) | ಶೀಘ್ರಲಿಪಿಗಾರರು (ಅಧ್ಯಕ್ಷರು ಮತ್ತು ಸದಸ್ಯರಿಗೆ) | – | 3 |
| 5) | ಬೆರಳಚ್ಚುಗಾರ | – | 1 |
| 6) | ಚಾಲಕರು | – | 3 |
| 7) | ಗ್ರೂಪ್ – ಡಿ | – | 1 |

ರಾಜ್ಯ ದೂರುಗಳ ಪ್ರಾಧಿಕಾರದ ಸದಸ್ಯರಿಗೆ ಸಂದಾಯ ಮಾಡುವ ಗೌರವಧನ ಮತ್ತು ಇತರ ಭತ್ಯೆಗಳು, ಮತ್ತು ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳಿಗೆ ಸಂಬಂಧಿಸಿದ ಆದೇಶಗಳನ್ನು ರಾಜ್ಯ ಸರ್ಕಾರದಿಂದ ಪ್ರತ್ಯೇಕವಾಗಿ ಹೊರಡಿಸಲಾಗುವುದು.

**(2) ಪ್ರಕಾರ್ಯಗಳು:**

ಪ್ರಾಧಿಕಾರವು, ಹೆಚ್ಚುವರಿ ಪೊಲೀಸ್ ಅಧೀಕ್ಷಕರನ್ನು ಒಳಗೊಂಡಂತೆ ಪೊಲೀಸ್ ಅಧೀಕ್ಷಕರು (ಎಸ್‌ಪಿ) ಮತ್ತು ಮೇಲ್ಪಟ್ಟ ದರ್ಜೆಯ ಅಧಿಕಾರಿಗಳ ವಿರುದ್ಧದ ದೂರುಗಳನ್ನು ಪರಿಶೀಲಿಸುವುದು ಮತ್ತು ಪೊಲೀಸ್ ಕಸ್ಟಡಿಯಲ್ಲಿ ಉಂಟಾದ ಮರಣ, ಗಂಭೀರವಾದ ಗಾಯ ಅಥವಾ ಅತ್ಯಾಚಾರ ಒಳಗೊಂಡಂತೆ ಪೊಲೀಸರಿಂದ ಎಸಗಿರುವ ಗಂಭೀರ ಸ್ವರೂಪದ ದುರ್ವರ್ತನೆಗಳ ಆರೋಪಗಳ ಬಗ್ಗೆ ಮಾತ್ರ ವಿಚಾರಣೆ ನಡೆಸುವುದು.

**II. ಜಿಲ್ಲಾ ಪೊಲೀಸ್ ದೂರುಗಳ ಪ್ರಾಧಿಕಾರ:**

**(1) ರಚನೆ**

| | | | |
|---|---|---|---|
| 1. | ಸಂಬಂಧಪಟ್ಟ ಜಿಲ್ಲೆಗಳ ಪ್ರಾದೇಶಿಕ ಆಯುಕ್ತರು | – | ಅಧ್ಯಕ್ಷರು |
| 2. | ಇಬ್ಬರು ವ್ಯಕ್ತಿಗಳು (ಒಬ್ಬರು ಸಿವಿಲ್ ಸೇವೆಯಿಂದ ಮತ್ತೊಬ್ಬರು ನಾಗರಿಕ ಸಮಾಜದಿಂದ) | – | ಸದಸ್ಯರು |

ರಾಜ್ಯ ಮಾನವ ಹಕ್ಕುಗಳ ಆಯೋಗ ಅಥವಾ ಲೋಕಾಯುಕ್ತ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಪಡೆದುಕೊಂಡ ಮೂರು ಸದಸ್ಯರುಗಳ ಎರಡು ಹೆಸರುಗಳ ಪಟ್ಟಿಯಿಂದ ಸರ್ಕಾರದ ನಿವೃತ್ತ ಜಂಟಿ ಕಾರ್ಯದರ್ಶಿ ಅಥವಾ ಮೇಲ್ಪಟ್ಟ ದರ್ಜೆಯ ನಿವೃತ್ತ ಸಿವಿಲ್ ಸೇವಾ ಅಧಿಕಾರಿಗಳ ಪೈಕಿ ಒಬ್ಬರನ್ನು ಮತ್ತು ಮೂರು ಸದಸ್ಯರುಗಳ ಇನ್ನೊಂದು ಪಟ್ಟಿಯಿಂದ ನಾಗರಿಕ ಸಮಾಜದ ವ್ಯಕ್ತಿಗಳ ಪೈಕಿ ಒಬ್ಬರನ್ನು ರಾಜ್ಯ ಮಟ್ಟದ ಪೊಲೀಸ್ ದೂರುಗಳ ಪ್ರಾಧಿಕಾರದೊಂದಿಗೆ ಸಮಾಲೋಚಿಸಿ ಸದಸ್ಯರನ್ನಾಗಿ ಆಯ್ಕೆ ಮಾಡತಕ್ಕದ್ದು.

**ಪರಂತು ಒಬ್ಬ ವ್ಯಕ್ತಿಯು.–**

1) ಯಾವುದೇ ರಾಜಕೀಯ ಪಕ್ಷದೊಂದಿಗೆ ಅಥವಾ ಪಕ್ಷಗಳೊಂದಿಗೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆತನು ಸ್ವತಃ ಸಹವರ್ತಿಯಾಗಿದ್ದರೆ;
2) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ನೈತಿಕ ಅಧಃಪತನವನ್ನು ಒಳಗೊಂಡಿರುವ ಒಂದು ಅಪರಾಧಕ್ಕಾಗಿ ಅಪರಾಧಿಯೆಂದು ನಿರ್ಣೀತನಾಗಿದ್ದರೆ ಮತ್ತು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ
3) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ
4) ಅಸ್ವಸ್ಥಚಿತ್ತನಾಗಿದ್ದರೆ ಮತ್ತು ಸಕ್ಷಮ ನ್ಯಾಯಾಲಯವು ಹಾಗೆಂದು ಘೋಷಿಸಿದ್ದರೆ; ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ನಿಗಮ ನಿಕಾಯವಾಗಿದ್ದರೆ; ಅಥವಾ
5) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಒಬ್ಬ ಸದಸ್ಯನಾಗಿ ತನ್ನ ಪ್ರಕಾರ್ಯಗಳ ನಿರ್ವಹಣೆಗೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುವ ಸಂಭವವಿರುವಂಥ ಹಣಕಾಸು ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದರೆ; ಅಥವಾ
6) ರಾಜ್ಯ ಸರ್ಕಾರವು ಗೊತ್ತುಪಡಿಸಬಹುದಾದಂಥ ಇತರ ಅನರ್ಹತೆಗಳನ್ನು ಹೊಂದಿದ್ದರೆ. – ಅವನು ಸದಸ್ಯನಾಗಿ ನೇಮಕಗೊಳ್ಳಲು ಅನರ್ಹನಾಗಿರತಕ್ಕದ್ದು.

ಜಿಲ್ಲಾ ದೂರುಗಳ ಪ್ರಾಧಿಕಾರದ ಪ್ರತಿಯೊಬ್ಬ ಸದಸ್ಯನು 3 ವರ್ಷಗಳವರೆಗೆ ಪದಾವಧಿಯಲ್ಲಿರತಕ್ಕದ್ದು.

ಪ್ರಾಧಿಕಾರಕ್ಕೆ ಸಹಾಯಕವಾಗಿ ಈ ಮುಂದಿನ ಹುದ್ದೆಗಳನ್ನು ಸೃಜಿಸಲಾಗಿದೆ:

| | | | |
|---|---|---|---|
| 1) | ಪ್ರಥಮ ದರ್ಜೆ ಸಹಾಯಕ | – | 1 |
| 2) | ಶೀಘ್ರಲಿಪಿಗಾರರು (ಸದಸ್ಯರಿಗೆ) | – | 2 |
| 3) | ಚಾಲಕರು | – | 2 |
| 4) | ಗ್ರೂಪ್ – ಡಿ | – | 1 |

ರಾಜ್ಯ ದೂರುಗಳ ಪ್ರಾಧಿಕಾರದ ಸದಸ್ಯರಿಗೆ ಸಂದಾಯ ಮಾಡುವ ಗೌರವಧನ ಮತ್ತು ಇತರ ಭತ್ಯೆಗಳು, ಮತ್ತು ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳಿಗೆ ಸಂಬಂಧಿಸಿದ ಆದೇಶಗಳನ್ನು ರಾಜ್ಯ ಸರ್ಕಾರ ಪ್ರತ್ಯೇಕವಾಗಿ ಹೊರಡಿಸುತ್ತದೆ.

**ಪ್ರಕಾರ್ಯಗಳು:**

ಪ್ರಾಧಿಕಾರವು, ಪೊಲೀಸ್ ಉಪ ಅಧೀಕ್ಷಕರ ದರ್ಜೆಯವರೆಗಿನ ಪೊಲೀಸ್ ಅಧಿಕಾರಿಗಳ ವಿರುದ್ಧದ ದೂರುಗಳನ್ನು ಪರಿಶೀಲಿಸುವುದು ಮತ್ತು ಪೊಲೀಸ್ ಕಸ್ಟಡಿಯಲ್ಲಿ ಉಂಟಾದ ಮರಣ, ಗಂಭೀರವಾದ ಗಾಯ ಅಥವಾ ಅತ್ಯಾಚಾರ ಕೃತ್ಯಗಳು ಒಳಗೊಂಡಂತೆ ಪೊಲೀಸರಿಂದ ಎಸಗಿರುವ ಗಂಭೀರ ಸ್ವರೂಪದ ದುರ್ವರ್ತನೆಗಳ ಆರೋಪಗಳ ಬಗ್ಗೆ ಮಾತ್ರ ವಿಚಾರಣೆ ನಡೆಸುವುದು. ಇದು ಸುಲಿಗೆ, ಭೂಮಿ/ಮನೆಯನ್ನು ಬಲವಂತವಾಗಿ ಕಿತ್ತುಕೊಂಡಿರುವ ಆರೋಪಗಳ ಬಗ್ಗೆ ಅಥವಾ ಗಂಭೀರ ಸ್ವರೂಪದ ಅಧಿಕಾರ ದುರುಪಯೋಗವನ್ನು ಒಳಗೊಂಡಿರುವ ಯಾವುದೇ ಘಟನೆ ಬಗ್ಗೆ ವಿಚಾರಣೆ ಸಹ ನಡೆಸಬಹುದು.

**III. ರಾಜ್ಯ ಮತ್ತು ಜಿಲ್ಲಾ ದೂರುಗಳ ಪ್ರಾಧಿಕಾರಗಳ ಶಿಫಾರಸುಗಳು**

ತಪ್ಪಿತಸ್ಥ ಪೊಲೀಸ್ ಅಧಿಕಾರಿ ವಿರುದ್ಧ ಯಾವುದೇ ಇಲಾಖಾ ಅಥವಾ ಕ್ರಿಮಿನಲ್ ಕ್ರಮಕ್ಕೆ ಸಂಬಂಧಿಸಿದಂತೆ ಎರಡೂ ಪ್ರಾಧಿಕಾರಗಳ ಶಿಫಾರಸುಗಳಿಗೆ ಸಕ್ಷಮ ಪ್ರಾಧಿಕಾರ ಬದ್ಧವಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ. ಆರ್. 380 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಯಾದಗಿರಿ ಪಟ್ಟಣದ ಮಹಾಯೋಜನೆಯ ಅವಧಿಯನ್ನು ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**

1. ಪತ್ರ ಸಂಖ್ಯೆ : ನಯೋಪ್ರಾಯಾ : ಮಾ.ಯೋ.ಪ : 2010-11/367-71, ದಿನಾಂಕ : 23-8-2010, 420, ದಿನಾಂಕ : 31-8-2010 ಮತ್ತು 423, ದಿನಾಂಕ : 1-9-2010.
2. ಸರ್ಕಾರಿ ಆದೇಶ ಸಂಖ್ಯೆ : ನಅಇ 29 ಎಂಐಬಿ 2000, ದಿನಾಂಕ : 22-8-2000.
3. ನಿರ್ದೇಶಕರು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ರವರ ಏಕ ಕಡತ ಸಂಖ್ಯೆ : ನಗ್ರಾಯೋ(02) : ಉನಿ(ಯೋ)/ಮ.ಯೋ/ಯಾದಗಿರಿ/45/2010-11, ದಿನಾಂಕ : 24-9-2010 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿಗಳು ಯಾದಗಿರಿ ಇವರು ಯಾದಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಯ (ಪರಿಷ್ಕೃತ-1)ನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸುವ ಸಂಬಂಧ ಯೋಜನಾ ಅವಧಿಯನ್ನು ದಿನಾಂಕ : 31-12-2013 ರವರೆಗೆ ವಿಸ್ತರಿಸಲು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಸರ್ಕಾರವು ಯಾದಗಿರಿ ಪಟ್ಟಣದ ಮಹಾಯೋಜನೆಯನ್ನು ದಿನಾಂಕ : 22-8-2000 ದಲ್ಲಿ ಅಂತಿಮ ಅನುಮೋದನೆ ನೀಡಿದ್ದು, ಅನುಮೋದಿತ ಮಹಾ ಯೋಜನೆಯ ಅವಧಿಯು 2011 ರವರೆಗೆ ಇರುತ್ತದೆ. ಪ್ರಾಧಿಕಾರವು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ ಕಲಂ 13 (ಡಿ) ರನ್ವಯ ಮಹಾಯೋಜನೆಯನ್ನು 10 ವರ್ಷಗಳಿಗೊಮ್ಮೆ ಪರಿಷ್ಕರಿಸಿ ಸರ್ಕಾರದ ಅನುಮೋದನೆಯನ್ನು ಪಡೆಯಬೇಕಾಗುತ್ತದೆ.

ಮಹಾಯೋಜನೆಯನ್ನು ಪರಿಷ್ಕರಿಸುವ ಕಾರ್ಯವು ಪ್ರಗತಿಯಲ್ಲಿದ್ದು ತಾಂತ್ರಿಕ ಸಿಬ್ಬಂದಿಯ ಕೊರತೆಯಿಂದಾಗಿ ಸಾಧಿಸಲಾಗುತ್ತಿರುವ ಪ್ರಗತಿ ಕುಂಟಿತವಾಗುತ್ತಿರುವುದಾಗಿ ಪ್ರಾಧಿಕಾರದ ಪತ್ರದಲ್ಲಿ ವಿವರಣೆ ನೀಡಿರುವ ಹಿನ್ನೆಲೆಯಲ್ಲಿ ಮತ್ತು ಮಹಾಯೋಜನೆಯನ್ನು ಪರಿಷ್ಕರಿಸುವ ಕಾರ್ಯವನ್ನು ಖಾಸಗಿ ಸಮಾಲೋಚಕರಿಗೆ ಈಗಾಗಲೇ ನೀಡಲಾಗಿದ್ದು, ಸದರಿ ಕಾರ್ಯವನ್ನು ಪೂರೈಸಿ ಸರ್ಕಾರದ ಅನುಮೋದನೆಗೆ ಸಲ್ಲಿಸಲು ಪ್ರಾಧಿಕಾರವು ಆದ್ಯತೆ ಮೇರೆಗೆ ಕ್ರಮ ಜರುಗಿಸುವ ಅವಶ್ಯವಿರುತ್ತದೆ.

ಸದರಿ ಪ್ರಸ್ತಾವನೆಯನ್ನು ನಿರ್ದೇಶಕರು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ರವರು ಪರಿಶೀಲಿಸಿ ಉಲ್ಲೇಖ (3)ರ ಏಕ ಕಡತದಲ್ಲಿ ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಯಾದಗಿರಿ ಪಟ್ಟಣಕ್ಕೆ ಈಗಾಗಲೇ ಅನುಮೋದಿಸಿರುವ ಮಹಾಯೋಜನೆಯ ಅವಧಿಯನ್ನು ದಿನಾಂಕ : 31-12-2012 ರವರೆಗೆ ವಿಸ್ತರಿಸಲು ಹಾಗೂ ಈ ಅವಧಿಯೊಳಗೆ ತಪ್ಪದೆ ಮಹಾಯೋಜನೆಯನ್ನು ಪರಿಷ್ಕರಿಸಿ ಸರ್ಕಾರದ ಅಂತಿಮ ಅನುಮೋದನೆ ಪಡೆದು ಅನುಷ್ಠಾನಗೊಳಿಸಲು ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 122 ಗುಅಪ್ರಾ 2010, ಬೆಂಗಳೂರು, ದಿನಾಂಕ : 31-1-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗಿರಿ ಪಟ್ಟಣದ ಮಹಾಯೋಜನೆಯನ್ನು ಪರಿಷ್ಕರಿಸಿ ಸರ್ಕಾರದ ಅಂತಿಮ ಅನುಮೋದನೆ ಪಡೆದು ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಪ್ರಸ್ತುತ ಜಾರಿಯಲ್ಲಿರುವ ಯಾದಗಿರಿ ಮಹಾಯೋಜನೆಯ ಅವಧಿಯನ್ನು ದಿನಾಂಕ : 31-12-2012 ರವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

**ಸರ್ಕಾರದ ಅಧೀನ ಕಾರ್ಯದರ್ಶಿ**

ಪಿ. ಆರ್. 385 ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಉತ್ತರ ಕನ್ನಡ ಜಿಲ್ಲೆ, ದಾಂಡೇಲಿ ಪಟ್ಟಣ ಮಹಾಯೋಜನೆಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ನಅಇ 72 ಟಿಟಿಪಿ 2000, ದಿನಾಂಕ : 23–6–2010.
2. ಸದಸ್ಯ ಕಾರ್ಯದರ್ಶಿ, ನಗರ ಯೋಜನಾ ಪ್ರಾಧಿಕಾರ, ದಾಂಡೇಲಿ ಪತ್ರ ಸಂಖ್ಯೆ : ನಯೋಪ್ರಾ/ದಾಂಡೇಲಿ/ಮಹಾಯೋ/38/09–10, ದಿನಾಂಕ : 4–11–2009.
3. ಸರ್ಕಾರಿ ಕಡತ ಸಂಖ್ಯೆ: 62 ಬೆಮಪ್ರಾ 2010 ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಸಲ್ಲಿಸಿರುವ ಪ್ರಸ್ತಾವನೆ ದಿನಾಂಕ : 29–11–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ದಾಂಡೇಲಿ ಪಟ್ಟಣದ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸದಸ್ಯ–ಕಾರ್ಯದರ್ಶಿ, ನಗರ ಯೋಜನಾ ಪ್ರಾಧಿಕಾರ, ದಾಂಡೇಲಿ ಇವರ ಪತ್ರದಲ್ಲಿ ಪ್ರಸ್ತುತ ದಾಂಡೇಲಿ ಪಟ್ಟಣದಲ್ಲಿ ಕಾರ್ಯನಿರ್ವಹಿಸುತ್ತಿದ್ದ, ಮೂರು ಕಾರ್ಖಾನೆಗಳಲ್ಲಿ ಎರಡು ಕಾರ್ಖಾನೆಗಳು ಮುಚ್ಚಲಾಗಿರುತ್ತದೆ ಹಾಗೂ ಕರ್ನಾಟಕ ವಿದ್ಯುತ್ ನಿಗಮದ ವಸತಿ ಕಾಲೋನಿಯನ್ನು ದಾಂಡೇಲಿಯಿಂದ ಸ್ಥಳಾಂತರಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಾಂಡೇಲಿ ಪಟ್ಟಣದ ಜನಸಂಖ್ಯೆಯು ಬಹಳಷ್ಟು ಕಡಿಮೆಯಾಗಿದೆ. ದಾಂಡೇಲಿ ಸ್ಥಳೀಯ ಯೋಜನಾ ಪ್ರದೇಶದ ಅಭಿವೃದ್ಧಿ ಹೊಂದಿರುವ ಪ್ರದೇಶದಲ್ಲಿ ಸಣ್ಣಪುಟ್ಟ ವಸತಿ ಬೆಳವಣಿಗೆಗಳನ್ನು ಹೊರತುಪಡಿಸಿ, ಯಾವುದೇ ಅಭಿವೃದ್ಧಿ ಚಟುವಟಿಕೆಗಳು ಬಂದಿರುವುದಿಲ್ಲ. ದಾಂಡೇಲಿ ಪಟ್ಟಣದ ಜನಸಂಖ್ಯೆಯು ಕಡಿಮೆಯಾಗುತ್ತಿರುವ ಹಿನ್ನೆಲೆಯಲ್ಲಿ, ದಾಂಡೇಲಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣವನ್ನು ಕಡಿಮೆಗೊಳಿಸಬಹುದಾಗಿರುತ್ತದೆ ಎಂದು ಹಾಗೂ 2011ರ ಜನಗಣತಿಯ ಕಾರ್ಯವು ಪೂರ್ಣಗೊಳ್ಳುವವರೆಗೆ, ಹಾಲಿ ಚಾಲ್ತಿಯಲ್ಲಿರುವ ಮಹಾಯೋಜನೆ (ಪರಿಷ್ಕೃತ–1)ಯನ್ನು ಮುಂದುವರಿಸಲು ಹಾಗೂ ಜನಗಣತಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಈ ಆಧಾರದ ಮೇಲೆ ಮಹಾಯೋಜನೆ (ಪರಿಷ್ಕೃತ –1)ನ್ನು ಪರಿಷ್ಕರಿಸಬಹುದು ಎಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಹಾಲಿ ಚಾಲ್ತಿಯಲ್ಲಿರುವ ದಾಂಡೇಲಿ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಯ ಕಾಲಾವಧಿ ಮುಗಿದಿದ್ದು, ಅನೂರ್ಜಿತವಾಗುವುದರಿಂದ, ಕಾನೂನು ಸಮಸ್ಯೆಗಳು ಉದ್ಭವವಾಗುವ ಸಾಧ್ಯತೆಯಿರುತ್ತದೆ, ಆದ್ದರಿಂದ ಸದರಿ ಮಹಾಯೋಜನೆ (ಪರಿಷ್ಕೃತ–1)ಯು ಊರ್ಜಿತದಲ್ಲಿರುವ ಹಾಗೆ ದಿನಾಂಕ : 23–6–2012 ರವರೆಗೆ ಕಾಲಾವಧಿಯನ್ನು ವಿಸ್ತರಿಸಿ ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 62 ಬೆಮಪ್ರಾ 2010, ಬೆಂಗಳೂರು, ದಿನಾಂಕ : 31–01–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾಂಡೇಲಿ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕೃತ–1)ಯ ಕಾಲಾವಧಿಯು ಮುಗಿದಿದ್ದು, ಪ್ರಾಧಿಕಾರವು ಕೋರಿರುವಂತೆ ಸದರಿ ಮಹಾಯೋಜನೆ (ಪರಿಷ್ಕೃತ–1)ಯು ಊರ್ಜಿತದಲ್ಲಿರುವ ಹಾಗೆ ದಿನಾಂಕ : 23–6–2012 ರವರೆಗೆ ಕಾಲಾವಧಿಯನ್ನು ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ. ಆರ್. 386

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಸಿಆಸುಇ (ಆಸು–ತರಬೇತಿ) ವಿಭಾಗದಲ್ಲಿ ನಿರ್ವಹಿಸಲಾಗುತ್ತಿರುವ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯನ್ನು ಸಿಆಸುಇ (ಆಸು) ವಿಭಾಗದಿಂದ ಶಾಶ್ವತವಾಗಿ ಸಿಆಸುಇ (ಇ–ಆಡಳಿತ) ವಿಭಾಗಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :**
1. ಸಿಆಸುಇ (ಆಸು) ಇಲಾಖೆಯ ಸುತ್ತೋಲೆ ಸಂಖ್ಯೆ : ಡಿಪಿಎಆರ್ 81 ಎಎಂಸಿ 86, ದಿನಾಂಕ : 22–5–1986
2. ಸಿಆಸುಇ (ಆಸು) ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 39 ಅಸಪ 94, ದಿನಾಂಕ : 25–11–1994.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 6 ಟಿಎಫ್‌ಪಿ 2006, ದಿನಾಂಕ : 20–1–2007.

**ಪ್ರಸ್ತಾವನೆ :**

ಸರ್ಕಾರದ ವಿವಿಧ ಇಲಾಖೆಗಳಿಗೆ ಅಗತ್ಯವಿರುವ ಪೀಠೋಪಕರಣಗಳು, ಫ್ಯಾನ್/ಕುಡಿಯುವ ನೀರಿನ ವ್ಯವಸ್ಥೆ, ಅಲ್ಮೆರಾ, ಮುಂತಾದ ಸಲಕರಣೆಗಳನ್ನು ಮಂಜೂರು ಮಾಡುವ ಸಲುವಾಗಿ ಲೆಕ್ಕ ಶೀರ್ಷಿಕೆ 2070–00–800–0–04–125 (ಯೋಜನೆ) ರಡಿ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯು ಹಿಂದಿನಿಂದಲೂ ಜಾರಿಯಲ್ಲಿದೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಸುತ್ತೋಲೆ ಹಾಗು ಅಧಿಕೃತ ಜ್ಞಾಪನದಲ್ಲಿ, ಈ ಯೋಜನೆಯನ್ನು ಜಾರಿಗೊಳಿಸುವ ಸಂಬಂಧ ಹಲವಾರು ಸೂಚನೆಗಳನ್ನು ಹೊರಡಿಸಲಾಗಿತ್ತು. ಅದರಂತೆಯೇ, ಸರ್ಕಾರದ ವಿವಿಧ ಇಲಾಖೆಗಳಿಂದ ಈ ಸಂಬಂಧ ಸ್ವೀಕರಿಸಲಾಗುವ ಕೋರಿಕೆಗಳ ಅನುಸಾರವಾಗಿ ಆಯಾ ಇಲಾಖೆಗಳಿಗೆ ಈ ಯೋಜನೆಯಡಿ ಅಗತ್ಯವಿರುವ ಪೀಠೋಪಕರಣ ಮುಂತಾದವುಗಳನ್ನು ಮಂಜೂರು ಮಾಡಲಾಗುತ್ತಿದೆ.

ಆದರೆ, ಇತ್ತೀಚೆಗೆ ಬಹುತೇಕ ಇಲಾಖೆಗಳು ತಮ್ಮ ಕಛೇರಿಯ ಆಧುನೀಕರಣಕ್ಕಾಗಿ ಅಗತ್ಯವಿರುವ ಕಛೇರಿಯ ಪೀಠೋಪಕರಣಗಳು, ಫ್ಯಾನ್/ಕುಡಿಯುವ ನೀರಿನ ವ್ಯವಸ್ಥೆ, ಅಲ್ಮೆರಾ, ಕಂಪ್ಯೂಟರ್ಸ್ ಮುಂತಾದ ಸಲಕರಣೆಗಳನ್ನು ಆಯಾ ಇಲಾಖೆಗೆ ನಿಗಧಿಪಡಿಸಿರುವ ಆಯವ್ಯಯದಲ್ಲಿ/ ಕೇಂದ್ರ ಸರ್ಕಾರದ ಯೋಜನೆಗಳಲ್ಲಿ/ಇತರೆ ಪ್ರಾಜೆಕ್ಟ್‌ಗಳಡಿಯಲ್ಲಿ ಖರೀದಿಸುತ್ತಿದ್ದಾರೆ. ಇದಲ್ಲದೆ, ಇದರ ಜೊತೆಗೆ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯಡಿಯಲ್ಲೂ ಸಹ ಮೇಲ್ಕಂಡ ಪೀಠೋಪಕರಣಗಳು/ಸಲಕರಣೆಗಳು/ಕಂಪ್ಯೂಟರ್ ಮುಂತಾದವುಗಳನ್ನು ಮಂಜೂರು ಮಾಡುವಂತೆ ಕೋರಿಕೆಗಳನ್ನು ಸಿಆಸುಇ (ಆಸು) ಇಲಾಖೆಗೆ ಸಲ್ಲಿಸುತ್ತಿರುವುದು ಕಂಡು ಬಂದಿದೆ. ಇದರಿಂದಾಗಿ ಯಾವ ಯಾವ ಇಲಾಖೆಯಲ್ಲಿ ಎಷ್ಟು ಪ್ರಮಾಣದಲ್ಲಿ

ಕಛೇರಿ ಆಧುನೀಕರಣಕ್ಕೆ ಸಂಬಂಧಿಸಿದ ಪೀಠೋಪಕರಣಗಳು/ ಸಲಕರಣೆಗಳು/ಕಂಪ್ಯೂಟರ್‌ಗಳನ್ನು ಖರೀದಿಸಲಾಗಿದೆ ಹಾಗೂ ಈ ಸಂಬಂಧ ಇಲಾಖೆಯ ಅವಶ್ಯಕತೆಗಳ ಬಗ್ಗೆ ಸ್ಪಷ್ಟವಾದ ಮಾಹಿತಿ ಇರುವುದಿಲ್ಲ. ಅಲ್ಲದೆ, ವಿವಿಧ ಮೂಲಗಳಿಂದ ಇಂತಹ ಪೀಠೋಪಕರಣಗಳು/ಸಲಕರಣೆಗಳು/ಕಂಪ್ಯೂಟರ್‌ಗಳನ್ನು ಖರೀದಿಸುವ ಬದಲಾಗಿ, ಇವುಗಳನ್ನು ಆಯಾ ಆಡಳಿತ ಇಲಾಖೆಯ ವತಿಯಿಂದ ಖರೀದಿಸುವುದು ಸೂಕ್ತವೆಂದು ಪರಿಗಣಿಸಲಾಗಿದೆ. ಇದಲ್ಲದೆ, ಇತ್ತೀಚೆಗೆ, ವಿವಿಧ ಇಲಾಖೆಗಳಿಗೆ ಅಗತ್ಯವಿರುವ ಕಛೇರಿಯ ಆಧುನೀಕರಣಕ್ಕಾಗಿ ವಸ್ತುಗಳನ್ನು ಖರೀದಿಸುವ ಸಲುವಾಗಿ ಪ್ರತಿಯೊಂದು ಆಡಳಿತ ಇಲಾಖೆಯ ಮಟ್ಟದಲ್ಲಿ TAP ಸಮಿತಿಯನ್ನು ರಚಿಸಲಾಗಿದೆ. ಇದರಿಂದಾಗಿ, ಆಯಾ ಆಡಳಿತ ಇಲಾಖೆಯ ಹಂತದಲ್ಲಿ ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗಳಲ್ಲಿ ಅನುದಾನವನ್ನು ಒದಗಿಸುವುದರ ಮೂಲಕ ಆಯಾ ಇಲಾಖೆಯ ಕಛೇರಿ ಆಧುನೀಕರಣಕ್ಕಾಗಿ ಅಗತ್ಯವಿರುವ ವಸ್ತುಗಳನ್ನು ಖರೀದಿಸಲು ಅವಕಾಶವಿರುತ್ತದೆ.

ಇದಲ್ಲದೆ, ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದಲ್ಲಿ ಆಯಾ ಇಲಾಖೆಗೆ ಸಣ್ಣ ಪ್ರಮಾಣದಲ್ಲಿ ಅಗತ್ಯವಿರುವ Computers and peripherals ಗಳನ್ನು TAP ಸಮಿತಿಯ ಅನುಮೋದನೆಯೊಂದಿಗೆ ಖರೀದಿಸಲು ವಿವಿಧ ಇಲಾಖಾ ಮುಖ್ಯಸ್ಥರುಗಳಿಗೆ ವಿಶೇಷ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ, ಈ ಯೋಜನೆಯನ್ನು ಯಾವ ಇಲಾಖೆಯಲ್ಲಿ ನಿರ್ವಹಿಸಬೇಕು ಎಂಬುದರ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಇನ್ನು ಮುಂದೆ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯಡಿ ಕಛೇರಿಯ ಪೀಠೋಪಕರಣಗಳು, ಫ್ಯಾನ್/ಕುಡಿಯುವ ನೀರಿನ ವ್ಯವಸ್ಥೆ, ಅಲ್ಮೆರಾ, ಕಂಪ್ಯೂಟರ್ಸ್ ಮುಂತಾದ ಸಲಕರಣೆಗಳನ್ನು ಸದರಿ ಯೋಜನೆಯಡಿ ಮಂಜೂರು ಮಾಡುವ ಅವಶ್ಯಕತೆ ಇರುವುದಿಲ್ಲವೆಂದು ನಿರ್ಣಯಿಸಲಾಗಿದೆ. ಇದಲ್ಲದೆ, ಸಿಆಸುಇ (ಇ–ಆಡಳಿತ) ವಿಭಾಗದ ವತಿಯಿಂದ ಸರ್ಕಾರದ ವಿವಿಧ ಇಲಾಖೆಗಳಿಗೆ ಅಗತ್ಯವಿರುವ ಪೇಪರ್‌ಲೆಸ್ ಸಾಫ್ಟ್‌ವೇರ್/ಕಛೇರಿಗಳ ಕಂಪ್ಯೂಟರೀಕರಣಕ್ಕಾಗಿ ಅಗತ್ಯವಿರುವ ಸಲಕರಣೆಗಳ ಬಗ್ಗೆ ಪರಿಶೀಲಿಸಲಾಗುತ್ತಿದೆ. ಆದುದರಿಂದ, ಇನ್ನು ಮುಂದೆ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯಡಿ ವಿವಿಧ ಇಲಾಖೆಗಳಿಗೆ ಅಗತ್ಯವಿರುವ ಪೇಪರ್‌ಲೆಸ್ ಸಾಫ್ಟ್‌ವೇರ್/ಕಛೇರಿಗಳ ಕಂಪ್ಯೂಟರೀಕರಣಕ್ಕಾಗಿ ಅಗತ್ಯವಿರುವ ಎಲ್ಲಾ ಸೌಲಭ್ಯಗಳನ್ನು ಮಂಜೂರು ಮಾಡುವ ಸಲುವಾಗಿ ವಿವಿಧ ಇಲಾಖೆಗಳು ತಮ್ಮ ಕೋರಿಕೆಯನ್ನು ಸದರಿ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯಡಿ ನೇರವಾಗಿ ಸಿಆಸುಇ (ಇ–ಆಡಳಿತ) ಇಲಾಖೆಗೆ ಕಳುಹಿಸಿಕೊಡುವಂತೆ ಸೂಚಿಸಲಾಗಿದೆ.

ಮೇಲ್ಕಂಡ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 230 ಇಆತ 2010, ಬೆಂಗಳೂರು, ದಿನಾಂಕ : 2ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ವಿವಿಧ ಇಲಾಖೆಗಳಿಂದ ಪೇಪರ್‌ಲೆಸ್ ಸಾಫ್ಟ್‌ವೇರ್/ಕಛೇರಿಗಳ ಕಂಪ್ಯೂಟರೀಕರಣಕ್ಕಾಗಿ ಅಗತ್ಯವಿರುವ ಎಲ್ಲಾ ಸೌಲಭ್ಯಗಳನ್ನು ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯಡಿ ಮಂಜೂರು ಮಾಡುವ ಸಲುವಾಗಿ ಸಿಆಸುಇ (ಆಸು) ಇಲಾಖೆಯಲ್ಲಿ ಪ್ರಸ್ತುತ ನಿರ್ವಹಿಸಲಾಗುತ್ತಿರುವ ಲೆಕ್ಕ ಶೀರ್ಷಿಕೆ "2070–00–800–0–04–125–ಸರ್ಕಾರಿ ಕಛೇರಿಗಳ ಆಧುನೀಕರಣ–ಆಧುನೀಕರಣ (ಯೋಜನೆ)" ರಡಿಯಲ್ಲಿನ ಸರ್ಕಾರಿ ಕಛೇರಿಗಳ ಆಧುನೀಕರಣ ಯೋಜನೆಯನ್ನು 2010–11ನೇ ಸಾಲಿನಿಂದ ಅನ್ವಯವಾಗುವಂತೆ ಶಾಶ್ವತವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ವಿಭಾಗಕ್ಕೆ ವರ್ಗಾಯಿಸಲಾಗಿದೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1027 ವೆಚ್ಚ–12/2010, ದಿನಾಂಕ : 19–1–2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಬ್ದುಲ್ ರೆಹಮಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 387 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು–ತರಬೇತಿ).

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಜಿ. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇವರ ಅಮಾನತ್ತನ್ನು ತೆರವುಗೊಳಿಸುವ ಕುರಿತು.

**ಓದಲಾಗಿದೆ :**
1. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ದಿನಾಂಕ : 21–5–2010ರ ಪತ್ರ ಸಂಖ್ಯೆ : ಗಭೂಇ/ಸಿಬ್ಬಂದಿ–ಅ–3/ಶಿಸ್ತು/2009–10/1605.
2. ದಿನಾಂಕ : 19–6–2010ರ ಸರ್ಕಾರಿ ಆದೇಶ ಸಂಖ್ಯೆ : ಸಿಐ 57 ಎಂಜಿಎಸ್ 2010,
3. ಶ್ರೀ ಜಿ. ನಾರಾಯಣಾಚಾರ್ ರವರ ದಿನಾಂಕ : 20–12–2010 ರ ಮನವಿ.

**ಪ್ರಸ್ತಾವನೆ :**

ಶ್ರೀ ಜಿ. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಅನಧಿಕೃತ ಮರಳು ಸಾಗಾಣಿಕೆ ನಿಯಂತ್ರಣಕ್ಕೆ ಪೊಲೀಸ್ ಹಾಗೂ ಕಂದಾಯ ಇಲಾಖೆಗಳ ಸಹಕಾರವನ್ನು ಒದಗಿಸಲಾಗಿದ್ದರೂ ಸಹ ಅನಧಿಕೃತ ಮರಳು ಸಾಗಾಣಿಕೆ/ಗಣಿಗಾರಿಕೆಯನ್ನು ತಡೆಗಟ್ಟುವಲ್ಲಿ ವಿಫಲರಾಗಿರುತ್ತಾರೆಂದು ಹಾಗೂ ಕೇಂದ್ರಸ್ಥಾನದಲ್ಲಿ ಉಪಸ್ಥಿತರಿರದೇ, ಕೇಂದ್ರಸ್ಥಾನವನ್ನು ಬಿಡುವಾಗ ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೇ ಕರ್ತವ್ಯಲೋಪ ಎಸಗಿದ್ದು, ಇವರು ಕಛೇರಿಗೆ ಪದೇ ಪದೇ ಗೈರುಹಾಜರಾಗುತ್ತಿದ್ದು, ಕರ್ತವ್ಯದಲ್ಲಿ ನಿರ್ಲಕ್ಷ್ಯತೆಯನ್ನು ತೋರುತ್ತಾ, ಬೇಜವಾಬ್ದಾರಿಯಿಂದ ವರ್ತಿಸಿರುವ ಪ್ರಯುಕ್ತ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರ ಮೇರೆಗೆ, ಮೇಲೆ (2) ರಲ್ಲಿ ಓದಲಾದ ದಿನಾಂಕ : 19–6–2010ರ ಸರ್ಕಾರಿ ಆದೇಶದಲ್ಲಿ ಶ್ರೀ ಜಿ. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ ಇವರನ್ನು, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ,

1957ರ ನಿಯಮ 10(1)(ಡಿ) ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಸೇವೆಯಿಂದ ಅಮಾನತ್ತುಗೊಳಿಸಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ : 20–12–2010 ರ ಮನವಿಯಲ್ಲಿ, ತಮ್ಮ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಉಪನಿರ್ದೇಶಕರ ಹುದ್ದೆಗೆ ಪುನರ್ ಸ್ಥಾಪಿಸಲು ಶ್ರೀ ಜಿ. ನಾರಾಯಣಾಚಾರ್, ಉಪನಿರ್ದೇಶಕರು (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 57 ಎಂಜಿಎಸ್ 2010, ಬೆಂಗಳೂರು, ದಿನಾಂಕ : 2–2–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಜಿ. ನಾರಾಯಣಾಚಾರ್, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧದ ಆರೋಪಗಳ ಕುರಿತು ನಿಯಮಾನುಸಾರ ವಿಚಾರಣೆಯನ್ನು ಕಾಯ್ದಿರಿಸಿ, ಕೇಂದ್ರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇಲ್ಲಿನ ಉಪನಿರ್ದೇಶಕರು (R & D), ರಿಕ್ತ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್‌ಸ್ಥಾಪಿಸಿ ಆದೇಶಿಸಿದೆ.

ಶ್ರೀ ಜಿ. ನಾರಾಯಣಾಚಾರ್, ಉಪ ನಿರ್ದೇಶಕರು, ಇವರು ಸೇರಿಕೆ ಕಾಲ, ಪ್ರಯಾಣಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ. ಆರ್. 388

## HOME SECRETARIAT

**Sub:** Constitution of Tender Scrutinizing Committee and prescription of various Authorities in Home Department for procurement of goods and services under the KTPP Act, 1999 and Rules, 2000 and other related matters-reg.

**Read :** Government Order No. FD 1 TFP 2008, dated : 16-5-2008.

**Preamble :**

In G.O. No. FD 1 TFP 2008 dated 16-5-2008 read above financial powers have been delegated to the Secretaries to Government of Administrative Departments to accord administrative approval for estimates of works and procurement of goods and services upto ` 5.00 crores subject to the provisions of the KTPP Act.

In Order to ensure that proper procedure as per KTPP Act and Rules is followed while finalizing tenders, Government considers it necessary to prescribe the Tender Inviting, Tender Scrutinizing and Tender Accepting Authorities in respect of the procurements to be made for various projects under the Central and State schemes by the departments coming under the administrative control of Home Department, Accordingly, the following orders are issued.

**GOVERNMENT ORDER NO: HD 14 PFS 2010, BANGALORE DATED : 3-2-2011**

In the circumstances explained in the preamble, the Tender Inviting Authority, Tender Scrutinizing Authority & Tender Accepting Authority under KTPP Act, 1999 and Rules, 2000 where the value of procurement is less than ` 1.00 crore and ` 1.00 crore & above under the Central and State schemes in respect of Police Department and other departments coming under the administrative control of Home Department shall be as follows, subject to conditions mentioned below :

| Sl. No. | Value of the Procurement | Tender Inviting Authority | Tender Scrutinizing Authority | Tender Accepting Authority |
|---|---|---|---|---|
| 1 | Less than ` 1.00 crore | DG & IGP or concerned HOD | DG & IGP or concerned HOD | DG & IGP or concerned HOD |
| 2 | ` 1.00 crore and upto ` 5.00 crores | DG & IGP or concerned HOD | DG & IGP or concerned HOD | Principal Secretary/ Secretary (PCAS) to Government, Home Department |
| 3 | Above ` 5.00 crores | DG & IGP or concerned HOD | Committee constituted under the Chairmanship of Principal Secretary to Government/ Secretary (PCAS) to Government. | Government in Home Department |

Conditions :-

1. All purchases should be made strictly in accordance with the procedure prescribed under the KTPP Act, 1999 and Rules, 2000 issued there under, from time to time.
2. The Director General and Inspector General of Police /Concerned HOD shall exercise financial powers within the limits delegated to him by the Government from time to time.
3. In respect of items of expenditure exceeding one crore proposal shall be sent to the Government for approval.

4. Details of tender & the specific proposal with the final vendor on the basis of the KTPP Act, 1999 & Rules, 2000 shall be sent to Government for approval with the recommendation of the Director General and Inspector General of Police/HOD. Only thereafter shall final order be placed with the vendor for supply.
5. In respect of cases where amount is deposited with the Karnataka State Police Housing Corporation Limited, Bangalore for procurement of items, the recommendation of the Karnataka State Police Housing Corporation shall be sent through the Director General and Inspector General of Police, Bangalore/HOD for approval of the Government.
6. These instructions will come into effect immediately in respect of all cases including the cases on hand.
7. These orders will not apply to CCTNS Project. However, the provisions of KTPP Act and Rules shall apply to the CCTNS Project.

Further the Tender Scrutinizing Committee above ` 5.00 crores in respect of the Police Department is constituted under the Chairmanship of Principal Secretary to Government, Home Department as below :-

| | | |
|---|---|---|
| 1. | The Additional Chief Secretary/Principal Secretary to Government, Home Department. | Chairman |
| 2. | The Director General & Inspector General of Police, Bangalore | Member |
| 3. | Director General & CMD, Karnataka State Police Housing Corporation Limited, Bangalore. (if procurement is undertaken through KSPHC) | Member |
| 4. | JCF, DG & IGP Office, Bangalore | Member |
| 5. | Finance Controller, KSPHC, Bangalore | Member |
| 6. | I.F.A. Home Department | Member |
| 7. | Co-opt any officer as member of the above Committee. | Member |
| 8. | ADGP (Administration) or Concerned ADGP. (He shall place the concerned file along with a detailed Note before the Committee). | Convener |

In respect of Departments other than the Police department coming under the administrative control of the Home Department, viz, Fire & Emergency Services, Prison, Sainik Welfare & Re-settlement, Home Guards & Civil Defence, Department of Prosecution, the Tender Scrutinizing Committee and Tender Accepting Authority is constituted under the Chairmanship of Secretary (PCAS) to Government, Home Department as below :-

| | | |
|---|---|---|
| 1. | Secretary (PCAS) to Government | Chairman |
| 2. | Head of the Department concerned | Member |
| 3. | I.F.A., Home Department | Member |
| 4. | Finance Controller, KSPHC Ltd., Bangalore if Procurement is undertaken through KSPHC | Member |
| 5. | Co-opt any officer as Member of the Committee | Member |
| 6. | Concerned Director/Joint Director | Convener |

This order is issued as per the delegation of powers delegated to Secretaries of Administrative Departments issued vide GO No. FD 1 TFP 2008, dated 16-5-2008.

By Order and in the name of the Governor of Karnataka,

**B.M. Lakshminarayana**

Under Secretary to Government,

Home Department, (Police Expenditure)

P.R. 389

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹರೀಬಾ, ಪ್ರೊ. ಪಿಎಸ್ಐ ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 64/ಸಿಬ್ಬಂದಿ–1/2009–10, ದಿನಾಂಕ : 22–2–2010 ಮತ್ತು 22–12–2010.

**ಪ್ರಸ್ತಾವನೆ :**

ಶ್ರೀ ಹರೀಬಾ, ಪ್ರೊ.ಪಿ.ಎಸ್.ಐ. ಚೌಕ್ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ರವರು ದಿನಾಂಕ : 15–12–2003 ರಂದು ಸೇವಾನಿರತ ಪಿಎಸ್ಐ ಆಗಿ ನೇಮಕಾತಿ ಹೊಂದಿ, ದಿನಾಂಕ : 15–6–2006 ರಂದು 2 1/2 ವರ್ಷಗಳ ಪರೀಕ್ಷಾರ್ಥ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ. ಈ ಅವಧಿಯಲ್ಲಿ ತರಬೇತಿಯ ಎಲ್ಲಾ ವಿಷಯಗಳಲ್ಲಿ ತೇರ್ಗಡೆಯಾಗದಿದ್ದರಿಂದ ಸದರಿಯವರ ಖಾಯಂಪೂರ್ವ ಅವಧಿಯನ್ನು ಕೆ.ಸಿ.ಎಸ್. (ಪ್ರೊಬೇಷನ್) ನಿಯಮ, 1977 ರ ನಿಯಮ 4(1) (ii) ರನ್ವಯ ದಿನಾಂಕ : 15–6–2006 ರಿಂದ 15–9–2007 ರವರೆಗೆ 01 ವರ್ಷ 3 ತಿಂಗಳು ವಿಸ್ತರಿಸಲಾಗಿರುತ್ತದೆ.

ಸದರಿಯವರು ದಿನಾಂಕ : 6–7–2009 ರಿಂದ 13–7–2009 ರವರೆಗೆ ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇಲ್ಲಿ ನಡೆದ ಅನುಪೂರಕ ಪರೀಕ್ಷೆಯ ಎಲ್ಲಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯಾಗಲೀ, ಕ್ರಿಮಿನಲ್ ಮೊಕದ್ದಮೆಯಾಗಲೀ ಅಥವಾ ಚಾಲ್ತಿ ಶಿಕ್ಷೆ ಇರುವುದಿಲ್ಲ. ಸದರಿಯವರ ಕಾರ್ಯವೈಖರಿ ತೃಪ್ತಿಕರವಾಗಿರುವುದರಿಂದ, ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 16–9–2007 ರಿಂದ 13–7–2009 ರವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 92 ಪೊಸಇ 2010, ಬೆಂಗಳೂರು, ದಿನಾಂಕ : 3–2–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಹರೀಬಾ ಪಿ.ಎಸ್.ಐ. ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 16–9–2007 ರಿಂದ 13–7–2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ. ಆರ್. 390

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಶ್ರೀ ಮಲ್ಲಿಕಾರ್ಜುನ ಪ್ರಭ, ನೋಟರಿ, ಬೀದರ್ ಇವರ ಕರ್ತವ್ಯ ಲೋಪದ ದೂರು ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ** :
1) ಶ್ರೀ ಡಿ. ಸುಮಂತ್, ಬೀದರ್ ಇವರ ದೂರು ಮನವಿ ದಿನಾಂಕ 30–1–2010
2) ಸರ್ಕಾರದ ಪತ್ರ ಸಂಖ್ಯೆ: ಲಾ 50 ಎಲ್‌ಸಿಎಲ್ 2010, ದಿನಾಂಕ 11–2–2010
3) ನೋಟರಿಯವರ ಲಿಖಿತ ಹೇಳಿಕೆ ದಿನಾಂಕ 25–2–2010,
4) ಸರ್ಕಾರದ ಪತ್ರ ಸಂಖ್ಯೆ: ಲಾ 50 ಎಲ್‌ಸಿಎಲ್ 2010, ದಿನಾಂಕ 8–4–2010
5) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರ ಪತ್ರ ಸಂಖ್ಯೆ: 10021/2010, ದಿನಾಂಕ 29–11–2010.

**ಪ್ರಸ್ತಾವನೆ :**

ಉಲ್ಲೇಖಿತ (1)ರ ದಿನಾಂಕ 30–1–2010ರ ಪತ್ರದಲ್ಲಿ ಶ್ರೀ ಡಿ. ಸುಮಂತ್, ಬೀದರ್ ಇವರು ನೋಟರಿಯವರು Forged Document of Agreement ಅನ್ನು ನೋಟರೈಜ್ ಮಾಡಿರುವ ಬಗ್ಗೆ ಆಪಾದಿಸಿ ನೋಟರಿಯವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ಸೂಚಿಸಿರುವ ದೂರು ಮನವಿಯನ್ನು ನೋಟರಿಯವರಿಗೆ ಒದಗಿಸಿ ಅವರ ಲಿಖಿತ ಹೇಳಿಕೆಯನ್ನು ನೀಡುವಂತೆ ಉಲ್ಲೇಖಿತ (2)ರ ದಿನಾಂಕ 11–2–2010ರ ಸರ್ಕಾರದ ಪತ್ರದಲ್ಲಿ ಕೋರಲಾಗಿತ್ತು.

ಉಲ್ಲೇಖಿತ (3)ರ ದಿನಾಂಕ 25–2–2010ರಲ್ಲಿ ನೋಟರಿಯವರು ಸಲ್ಲಿಸಿರುವ ಲಿಖಿತ ವಿವರಣೆಯನ್ನು ಉಲ್ಲೇಖಿತ (4)ರ ದಿನಾಂಕ 8–4–2010ರ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರಿಗೆ ಕಳುಹಿಸಿ ಈ ಬಗ್ಗೆ ವಿಚಾರಣಾ ವರದಿಯನ್ನು ಕಳುಹಿಸುವಂತೆ ಕೋರಲಾಗಿತ್ತು.

ಅದರಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರು ಉಲ್ಲೇಖಿತ (5)ರ ದಿನಾಂಕ 29–11–2010ರ ಪತ್ರದಲ್ಲಿ ವಿಚಾರಣಾ ವರದಿ ಸಲ್ಲಿಸಿದ್ದು, ಅದರಲ್ಲಿ ಮಾರಾಟ ಕರಾರು ವಿಷಯವು ನ್ಯಾಯಾಲಯ ಪ್ರಕರಣವಾಗಿದ್ದು, ಅದನ್ನು ನ್ಯಾಯಾಲಯವು ನಿರ್ಣಯಿಸಬೇಕು. ನೋಟರಿಯವರು ಕರಾರು ಪತ್ರವನ್ನು ತಯಾರಿಸಿರುವುದಿಲ್ಲ. 2ನೇ ಪಕ್ಷದವರ ಸಹಿಯನ್ನು ಮಾತ್ರ ದೃಢೀಕರಿಸಿರುವರೆಂಬ ನಿರ್ಣಯಕ್ಕೆ ಬರಬಹುದು. ಇತರೆ ಆಪಾದನೆಗಳಲ್ಲಿ ಸತ್ಯಾಂಶಗಳು ಕಂಡುಬರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ಸಕ್ಷಮ ಪ್ರಾಧಿಕಾರ ಹಾಗೂ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ವಿಚಾರಣಾ ವರದಿಯನ್ನು ಸರ್ಕಾರದ ಹಂತದಲ್ಲಿ ಪರಿಗಣಿಸಿ ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 50 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ: 02-02-2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರ ವರದಿಯನ್ವಯ ಶ್ರೀ ಮಲ್ಲಿಕಾರ್ಜುನಪ್ರಭಾ, ನೋಟರಿ, ಬೀದರ್ ಇವರ ಮೇಲಿನ ಆರೋಪದಲ್ಲಿ ಮೇಲ್ನೋಟಕ್ಕೆ ಸತ್ಯಾಂಶಗಳು ಕಂಡುಬರುವುದಿಲ್ಲವಾದ್ದರಿಂದ ಪ್ರಕರಣ ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾ. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. ನಂ. 391

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ** : ಡಾ॥ ಶಶಿಧರ್ ಆರ್. ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇವರು ಅನಧಿಕೃತ ಗೈರುಹಾಜರಾಗಿದ್ದು, ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ** : ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆಂವಿ11/ಚಿತ್ರದುರ್ಗ/56/2010–2011, ದಿನಾಂಕ 03–1–2011.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ॥ ಶಶಿಧರ್ ಆರ್. ಇವರು ಸರ್ಕಾರದ ಆದೇಶ ಸಂಖ್ಯೆ: ಆಕುಕ/739/ಹೆಚ್‌ಎಸ್‌ಹೆಚ್ 2008, ದಿನಾಂಕ 10–02–2009ರಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಗೊಂಡು ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇಲ್ಲಿ ದಿನಾಂಕ 13–02–2009 ರಂದು ಹುದ್ದೆಗೆ ಹಾಜರಾಗಿರುತ್ತಾರೆ ಹಾಗೂ ದಿನಾಂಕ 14–02–2009 ರಿಂದ ಸೇವೆಗೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿರುವುದರಿಂದ ಪ್ರೊಬೇಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 19 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ: 01–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಶಶಿಧರ್ ಆರ್. ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ದಿನಾಂಕ 14–02–2009 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರಿಗೆ ಇಲಾಖೆಯ ವೈದ್ಯಾಧಿಕಾರಿ ಹುದ್ದೆಯಲ್ಲಿ ಮುಂದುವರೆಯಲು ಇಚ್ಛೆ ಇಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ 14–02–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

ಪಿ.ಆರ್. ನಂ. 392

## ವಸತಿ ಸಚಿವಾಲಯ

**ವಿಷಯ** : ಮುಲ್ಕಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : ಸರ್ಕಾರದ ಆದೇಶ ಸಂ. ವಇ 42 ಹೆಚ್ ಎ ಎಂ 1999, ದಿನಾಂಕ 10–05–2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 98 ಹೆಚ್‌ಎಎಸ್ 2010 (ಭಾ–1), ಬೆಂಗಳೂರು, ದಿನಾಂಕ: 29–01–2011**

ಮುಲ್ಕಿ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಜಸುಧನ್, ಉಳ್ಳಾಲ, ನಾರಾಯಣ ಗುರು ಆಸ್ಪತ್ರೆ ಬಳಿ, ಮುಲ್ಕಿ | ಸಾಮಾನ್ಯ |
| 2 | ಶ್ರೀ ವಿಜಯ ಕೋಟ್ಯಾನ್, ಗುರಿಕಾರ್ ಹೌಸ್, ಮಾನಂಪಾಡಿ, ಮುಲ್ಕಿ | ಹಿಂದುಳಿದ ವರ್ಗ |
| 3 | ಶ್ರೀಮತಿ ಲಕ್ಷ್ಮಿ, ಸರ್ಕಾರಿ ಹೈಸ್ಕೂಲ್ ಬಳಿ, ಗೇರುಕಟ್ಟೆ, ಮುಲ್ಕಿ | ಪರಿಶಿಷ್ಟ ಜಾತಿ (ಮಹಿಳೆ) |
| 4 | ಶ್ರೀ ಮೆಲ್ವಿನ್, ದೇವಿ ಪ್ರಸಾದ್ ಕಾಂಪೌಂಡ್ , ಸರ್ಕಾರಿ ಕಾಲೇಜು ಬಳಿ, ಮುಲ್ಕಿ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಆರ್. ವಲ್ಲೂರ**
ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. ನಂ. 393

## ವಸತಿ ಸಚಿವಾಲಯ

**ವಿಷಯ** : ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999, ದಿನಾಂಕ 10–05–2000
2. ಸರ್ಕಾರದ ಆದೇಶ ಸಂ. ವಇ 9 ಹೆಚ್‌ಎಎಸ್ 2008, ದಿನಾಂಕ 17–02–2009

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೀದರ್ ಜಿಲ್ಲೆಯ ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 225 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 02-02-2011**

ಬೀದರ್ ನಗರ ಆಶ್ರಯ ಸಮಿತಿಗೆ ಈ ಹಿಂದೆ ನಾಮನಿರ್ದೇಶಿಸಿದ್ದ ಅಧಿಕಾರೇತರ ಸದಸ್ಯರ ನೇಮಕಾತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಸ್ಥಾನದಲ್ಲಿ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಶಿವಪುತ್ರ ಬಿನ್ ವೀರಪ್ಪ ವೈದ್ಯ, ಪಾರ್ವತಿ ನಿಲಯ, ಗೋವಿಂದ ಲೇಔಟ್, ಜನವಾಡ ರಸ್ತೆ, ಬೀದರ್ | ಪರಿಶಿಷ್ಟ ಜಾತಿ |
| 2 | ಶ್ರೀ ರಾಜು ಬಿನ್ ಬಸವಣ್ಣಪ್ಪ ಬಿರಾದಾರ್, ನಂ. 9-5-148, ಬಿರಾದಾರ ಕಾಂಪ್ಲೆಕ್ಸ್, ಚಿದ್ರಿ ರಸ್ತೆ, ಬೀದರ್. | ಸಾಮಾನ್ಯ |
| 3 | ಶ್ರೀಮತಿ ತಸ್ಮಿನ್ ಫಾತಿಮಾ ಬಿನ್ ಸೈಯದ್ ಎಜಾಜ್ ಅಲಿ, ನಂ. 2-5-31, ಪನಸಾಲ ತಾಲಿಮ್, ಫತೆದರವಾಜಾ ಹತ್ತಿರ, ಬೀದರ್ | ಅಲ್ಪಸಂಖ್ಯಾತರು (ಮಹಿಳೆ) |
| 4 | ಶ್ರೀ ಸುಭಾಷ್ ಬಿನ್ ಅಂಬಾಜಿರಾವ ಜೋಳಕರ, ಚೌಬಾರಾ ಎದುರು, ಬೀದರ್ | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಆರ್. ವಲ್ಲೂರ**
ಪೀಠಾಧಿಕಾರಿ-2, ವಸತಿ ಇಲಾಖೆ

ಪಿ.ಆರ್. ನಂ. 394

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : 2010-11ನೇ ಸಾಲಿಗೆ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 35 ಅಡವಿ 2010, ದಿನಾಂಕ 15-04-2010
2) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 54 ಅಡವಿ 2010(1), ಬೆಂಗಳೂರು, ದಿನಾಂಕ 07-05-2010.
3) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 54 ಅಡವಿ 2010, ಬೆಂಗಳೂರು, ದಿನಾಂಕ 17-09-2010.
4) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 54 ಅಡವಿ 2010, ಬೆಂಗಳೂರು, ದಿನಾಂಕ 20-11-2010.
5) ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಮಾತಂನಿ/ಲೆಕ್ಕ-1/ಮಾತಂ.ಉ.ಅಭಿ.ವೆಚ್ಚ/09/915/10-11, ದಿನಾಂಕ 10-01-2011.

**ಪ್ರಸ್ತಾವನೆ :**

2010-11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451-00-090-2-01 ಮಾಹಿತಿ ತಂತ್ರಜ್ಞಾನ-ಉನ್ನತೀಕರಣ ಮತ್ತು ಅಭಿವೃದ್ಧಿ 059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 1000.00 ಲಕ್ಷಗಳ ಅನುದಾನವನ್ನು ಒದಗಣೆ ಮಾಡಲಾಗಿದೆ. ಅದರಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 120.00 ಲಕ್ಷಗಳನ್ನು ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತ ನಿರ್ವಹಣೆಗಾಗಿ ಮೊದಲನೆಯ ಕಂತಾಗಿ ರೂ. 30.00 ಲಕ್ಷಗಳ ಅನುದಾನವನ್ನು ಹಾಗೂ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎರಡನೇ ಕಂತಾಗಿ ರೂ. 30.00 ಲಕ್ಷಗಳು ಹೀಗೆ ಒಟ್ಟು ರೂ. 60.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ಮೂರನೇ ಕಂತಾಗಿ ರೂ. 30.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಈ ಸಂಸ್ಥೆಯು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉನ್ನತೀಕರಣ ಮತ್ತು ಚಟುವಟಿಕೆಗಳನ್ನು ಕಾರ್ಯಗತ ಮಾಡುತ್ತಿದ್ದು, ಜನವರಿ-2011 ರಿಂದ ಮಾರ್ಚ್-2011ರವರೆಗೆ ಹಮ್ಮಿಕೊಳ್ಳಲಾದ ಕಾರ್ಯಕ್ರಮಗಳು/ವಸ್ತು ಪ್ರದರ್ಶನದ ಜಾಹೀರಾತುಗಳ ಬಿಡುಗಡೆ ಹಾಗೂ ಬ್ರೋಚರ್ ಸಿಡಿಗಳ ತಯಾರಿಕೆಗಳ ವೆಚ್ಚಕ್ಕಾಗಿ 2010-11ನೇ ಸಾಲಿನ ಆಯವ್ಯಯದಲ್ಲಿ ರೂ. 136.00 ಲಕ್ಷಗಳನ್ನು ಹಾಗೂ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 30.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 54 ಅಡವಿ 2010, ಬೆಂಗಳೂರು, ದಿನಾಂಕ: 03-02-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2010-11ನೇ ಸಾಲಿನಲ್ಲಿ ಕೆಬಿಟ್ಸ್ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 30.00 ಲಕ್ಷಗಳ (ರೂ. ಮುವತ್ತು ಲಕ್ಷಗಳು ಮಾತ್ರ)ನ್ನು ಹಾಗೂ ರೂ. 91.00 (ರೂ. ತೊಂಬತ್ತೊಂದು ಲಕ್ಷಗಳು ಮಾತ್ರ) ಲಕ್ಷಗಳನ್ನು ಐಟಿ ಪ್ರಮೋಶನ್ ಚಟುವಟಿಕೆಗಳಿಗಾಗಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಗೆ ಪಾವತಿಸಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010-11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451-00-090-2-01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ-059-ಇತರೆ ವೆಚ್ಚ (ಯೋಜನೆ)"** ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು [ಕೆಬಿಟ್ಸ್] ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 29 ವೆಚ್ಚ-2/11, ದಿನಾಂಕ 31-01-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. ನಂ. 395

## ವಸತಿ ಸಚಿವಾಲಯ

**ವಿಷಯ** : ಬೆಳ್ತಂಗಡಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂ. ವಇ 42 ಹೆಚ್ಎಎಂ 1999, ದಿನಾಂಕ 10-05-2000
2. ಸರ್ಕಾರದ ಆದೇಶ ಸಂ. ವಇ 31 ಹೆಚ್ಎಎಸ್ 2008, ದಿನಾಂಕ 12-12-2008

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 01 ಹೆಚ್ಎಎಸ್ 2011, ಬೆಂಗಳೂರು, ದಿನಾಂಕ: 02-02-2011**

ಬೆಳ್ತಂಗಡಿ ಪಟ್ಟಣ ಆಶ್ರಯ ಸಮಿತಿಗೆ ಈ ಹಿಂದೆ ನಾಮನಿರ್ದೇಶಿಸಿದ್ದ ಅಧಿಕಾರೇತರ ಸದಸ್ಯರ ನೇಮಕಾತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಸ್ಥಾನದಲ್ಲಿ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಸುಂದರ ಗೌಡ, ದುರ್ಗಾ ಕೃಪಾ ನಿಲಯ, ಹುಣ್ಸೆಕಟ್ಟೆ ಮನೆ, ಬೆಳ್ತಂಗಡಿ | ಸಾಮಾನ್ಯ |
| 2 | ಶ್ರೀಮತಿ ರಜನಿ ಕುಡ್ವ, ಮುಗುಳಿ ರಸ್ತೆ ಮನೆ, ಬೆಳ್ತಂಗಡಿ | ಹಿಂದುಳಿದ ವರ್ಗ |
| 3 | ಶ್ರೀಮತಿ ಸುಂದರಿ, ಸುದೆ ಮುಗೇರು ಮನೆ, ಬೆಳ್ತಂಗಡಿ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಸುಧಾಮಣಿ ಬಿನ್ ಜಗತ್‌ಪಾಲ್ ಜೈನ್, ನ್ಯಾಯಾಲಯದ ಬಳಿ, ಸಂಜಯನಗರ, ಬೆಳ್ತಂಗಡಿ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಆರ್. ವಲ್ಲೂರ**
ಪೀಠಾಧಿಕಾರಿ-2,
ವಸತಿ ಇಲಾಖೆ

ಪಿ.ಆರ್. ನಂ. 396

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. ಹಿಂದಿನ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣಕ್ಕೆ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ** : 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ/56/2010, ದಿನಾಂಕ 10-12-2010.
2) ತನಿಖಾಧಿಕಾರಿಯವರ ವರದಿ ದಿನಾಂಕ 07-12-2010
3) ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಟ್ರ್ಯಾಪ್ ಪಂಚನಾಮೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿ.

**ಪ್ರಸ್ತಾವನೆ :**

ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರ ವಿರುದ್ಧ ಗುನ್ನೆ ಸಂಖ್ಯೆ: 56/2010ರಲ್ಲಿ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ (ಉಲ್ಲೇಖ-2) ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 10-12-2010

(ಉಲ್ಲೇಖ–1) ರೊಡನೆ ಕಳುಹಿಸುತ್ತಾ. ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988ರ 19(1)(ಬಿ) ಕಲಂನಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ (ಉಲ್ಲೇಖ–1) ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ/56/2010, ದಿನಾಂಕ 10–12–2010ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಸಿ. ನಾರಾಯಣಸ್ವಾಮಿ ಬಿನ್ ಲೇಟ್ ಚಿಕ್ಕೋನಪ್ಪ ನಂ. 5 ಕ್ಲಾಸಿಕ್ ಕಾಲೋನಿ, ಬಂಗ್ಲಾಪೇಟೆ, ಬೊಮ್ಮಸಂದ್ರ, ಬೆಂಗಳೂರು–99 ರವರ ದೂರು ದಿನಾಂಕ 29–11–2010.
2. ಪ್ರಥಮ ವರ್ತಮಾನ ವರದಿ ದಿನಾಂಕ 29–11–2010 ಬೆಂಗಳೂರು ನಗರ ವಿಭಾಗ ಕರ್ನಾಟಕ ಲೋಕಾಯುಕ್ತ ಪ್ರಕರಣ ಸಂ. 56/2010.
3. ಪ್ರಾಯೋಗಿಕ ಪಂಚನಾಮೆ ದಿನಾಂಕ 29–11–2010
4. ದಿನಾಂಕ 29–11–2010 ರಂದು ಫಿರ್ಯಾದುದಾರರಿಗೆ ಅಳವಡಿಸಿದ್ದ ಸ್ಪೈ–ಕ್ಯಾಮರಾದಲ್ಲಿ ಸೆರೆ ಹಿಡಿದಿರುವ ದೃಶ್ಯಾವಳಿಗಳು ಹಾಗೂ ಸಂಭಾಷಣೆಯ ಲಿಪೀಕರಣ.
5. ದಿನಾಂಕ 29–11–2010 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಆರೋಪಿತರ ನಡುವೆ ನಡೆದ ಸಂಭಾಷಣೆಯ ಲಿಪೀಕರಣ.
6. ದಿನಾಂಕ 29–11–2010 ರಂದು ಟ್ರ್ಯಾಪ್ ಪಂಚನಾಮೆ ಸಮಯದಲ್ಲಿ ಫಿರ್ಯಾದುದಾರರಿಂದ ಪಡೆದ ಸ್ಪೈ–ಕ್ಯಾಮರಾದಲ್ಲಿ ರಿಕಾರ್ಡಿಂಗ್ ಆಗಿದ್ದ ವಿಡಿಯೋ ಚಿತ್ರೀಕರಣದಲ್ಲಿ ಧ್ವನಿಮುದ್ರಿತ ಸಂಭಾಷಣೆಯ ಲಿಪೀಕರಣ.
7. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂ. PHI/CME/LOK:138/10-11, dated 01-12-2010
8. ಕೃತ್ಯ ನಡೆದ ಸ್ಥಳದ ನಕಾಶೆ ಸಹಾಯಕ ಕಾರ್ಯಪಾಲಕ ಅಭಿಯಂತರರು. ನಂ. 7 ಕಟ್ಟಡಗಳ ಉಪ ವಿಭಾಗ, ಬೆಂಗಳೂರು ರವರ ಪತ್ರ ಸಂ.ಸಕಾಅ/ಕಉವಿ–7/ಸಅ/ಕೃನಸ್ಥನ/2010–11/1074, ದಿನಾಂಕ 02–12–2010.
9. ಈ ಕೆಳಕಂಡವರು ತನಿಖಾಧಿಕಾರಿಗಳ ಸಮಕ್ಷಮ ನೀಡಿದ ಹೇಳಿಕೆಗಳು:
    1. ಶ್ರೀ ಸಿ. ನಾರಾಯಣಸ್ವಾಮಿ ಬಿನ್ ಚಿಕ್ಕೋನಪ್ಪ, ನಂ.–5, ಕ್ಲಾಸಿಕ್ ಕಾಲೋನಿ ಬಾಂಗ್ಲಾ ಪೇಟೆ, ಬೊಮ್ಮಸಂದ್ರ, ಬೆಂಗಳೂರು.
    2. ಶ್ರೀ ಆರ್. ಉಮೇಶ್ ರಾವ್ ಬಿನ್ ಲೇಟ್ ರಾಮರಾವ್ ದ್ವಿ.ದ.ಸ., ಕೆ.ಜಿ.ಐ.ಡಿ., ವಿ.ವಿ.ಗೋಪುರ, ಬೆಂಗಳೂರು
    3. ಶ್ರೀ ಸದಾಶಿವಪ್ಪ ಬಿನ್ ಹೊನ್ನಪ್ಪ, ದ್ವಿ.ದ.ಸ., ಕೆ.ಜಿ.ಐ.ಡಿ., ವಿ.ವಿ. ಗೋಪುರ, ಬೆಂಗಳೂರು
    4. ಶ್ರೀ ಟಿ. ಭದ್ರಾರೆಡ್ಡಿ ಬಿನ್ ಲೇಟ್ ತಾಯಪ್ಪರೆಡ್ಡಿ, ಮುತ್ತನಲ್ಲೂರು ಗ್ರಾಮ ಸರ್ಜಾಪುರ ಹೋಬಳಿ ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.
    5. ಶ್ರೀ ಶ್ರೀನಿವಾಸ್ ಬಿನ್ ಬಾಲಪ್ಪ, ನಾಗವಾರ, ಬೆಂಗಳೂರು
    6. ಶ್ರೀ ಕೆ. ಎಸ್. ಉದಯಾನಂದ್, ಸುಂಕದ ಕಟ್ಟೆ, ಬೆಂಗಳೂರು.
    7. ಶ್ರೀ ಜಿ. ಬಿ. ರಾಮಪ್ಪ ಬಿನ್ ಲೇಟ್ ಹನುಮಂತರಾಯಪ್ಪ, ಗಂಗಸಾಗರ, ಪಾವಗಡ
    8. ಶ್ರೀ ಬಿ. ಎನ್. ಬೈರೆಗೌಡ ಬಿನ್ ಲೇಟ್ ನಾರಾಯಣಪ್ಪ, ಬೆಂಗಳೂರು
    9. ಶ್ರೀ ಸಿ. ನಾರಾಯಣ, ದ್ವಿ.ದ.ಸ. ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು
    10. ಶ್ರೀ ಎಂ. ಲಿಂಗಯ್ಯ ಬಿನ್ ಮಾದಯ್ಯ, ಬೆಂಗಳೂರು
    11. ಶ್ರೀ ಸುಬ್ರಮಣ್ಯ ಬಿನ್ ಲೇಟ್ ಜೆ. ನಂಜುಂಡಪ್ಪ, ಬೆಂಗಳೂರು
    12. ಶ್ರೀ ಗೋವಿಂದರಾಜು ಲೇಟ್ ಚಿಕ್ಕಗುಂಡಪ್ಪ, ಬೆಂಗಳೂರು
11. ತನಿಖಾ ವರದಿಯೊಂದಿಗಿರುವ ಲಂಚ ಕೇಳಲು ಆಧಾರವಾದ ಕಡತ ಸಂ. 56/10ರ ನಕಲು ಪ್ರತಿ
12. ಆಪಾದಿತರ ಸಮಜಾಯಿಷಿಗಳು

3. ತನಿಖಾಧಿಕಾರಿಗಳಾದ ಶ್ರೀ ಕೆ. ರವಿಶಂಕರ್, ಪೋಲೀಸ್ ಇನ್ಸ್‌ಪೆಕ್ಟರ್ ನಗರ ವಿಭಾಗ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಹೆಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ನಗರ ವಿಭಾಗ ಬೆಂಗಳೂರು ಕರ್ನಾಟಕ ಲೋಕಾಯುಕ್ತ ಠಾಣೆ ಗುನ್ನೆ ನಂ. 56/2010 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4. ದಿನಾಂಕ 14–11–2010 ರಂದು ಫಿರ್ಯಾದುದಾರರು ವಿಶೇಷ ಜಿಲ್ಲಾಧಿಕಾರಿಯಾದ ಶ್ರೀ ಎಚ್. ರಾಮಾಂಜನೇಯ ರವರನ್ನು ಭೇಟಿ ಮಾಡಿ, ಜಮೀನುಗಳ ಭೂ ಪರಿವರ್ತನೆ ಕುರಿತು ವಿಚಾರಿಸಿದಾಗ ಅವರು ಕೆಲಸ ಮಾಡಿಕೊಡುವುದಾಗಿ ಹೇಳಿ ಅವರ ಕೊಠಡಿಯಲ್ಲೇ ಇದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಅವರ ಕಡೆಯವರ ಒಂದು ಮದುವೆ ಇದೆ. ಅದಕ್ಕಾಗಿ ನೀವು ರೂ. 2.00 ಲಕ್ಷಗಳ ಡಿ.ಡಿ.ಯನ್ನು ನೀಡುವಂತೆ ತಿಳಿಸಿರುತ್ತಾರೆ. ಫಿರ್ಯಾದುದಾರರು ಸದರಿ ವ್ಯಕ್ತಿಯನ್ನು ಈ ಕುರಿತು ವಿಚಾರಿಸಿದಾಗ ಅವರು ಡಿ.ಡಿ.ಯನ್ನು ಕೊಟ್ಟರೆ ಮಾತ್ರ ಕೆಲಸ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ. ದಿನಾಂಕ 27–11–2010 ರಂದು ಫಿರ್ಯಾದುದಾರರು ಆರೋಪಿ–1 ಶ್ರೀ ಎಚ್. ರಾಮಾಂಜನೇಯ ರವರನ್ನು ಭೇಡಿ ಮಾಡಿ ತಮ್ಮ ಕೆಲಸದ ಬಗ್ಗೆ ವಿಚಾರಿಸಿದಾಗ ಆರೋಪಿತರು ಅವರ ಕೆಲಸ ಮಾಡಿಕೊಡುವುದಾಗಿ ಹೇಳಿ ಅವರ ಕೊಠಡಿಯಲ್ಲಿದ್ದ ಒಬ್ಬ ವ್ಯಕ್ತಿಯನ್ನು ತೋರಿಸಿ ಅವರಿಗೆ ಸ್ವಲ್ಪ ದುಡ್ಡುಕೊಡಲು ತಿಳಿಸಿದ್ದು ಫಿರ್ಯಾದುದಾರರು ರೂ. 50 ಸಾವಿರಗಳನ್ನು ಕೊಡುವುದಾಗಿ ಒಪ್ಪಿದಾಗ ಆರೋಪಿ–1 ರವರು ಫಿರ್ಯಾದುದಾರರ ಕೆಲಸ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ. ಈ ಎಲ್ಲಾ ವಿದ್ಯಾಮಾನಗಳನ್ನು ಫಿರ್ಯಾದುದಾರರು ಬಟನ್ ಕ್ಯಾಮರಾದಲ್ಲಿ ಚಿತ್ರೀಕರಣ ಮಾಡಿಕೊಂಡಿದ್ದು, ಸಂಭಾಷಣೆಯನ್ನು ಡಿಜಿಟಲ್ ವಾಯ್ಸ್ ರೆಕಾರ್ಡ್‌ನಲ್ಲಿ ರೆಕಾರ್ಡ್ ಮಾಡಿಕೊಂಡಿರುತ್ತಾರೆ.

5. ಫಿರ್ಯಾದುದಾರರಿಗೆ ಆರೋಪಿತರು ಕೇಳಿದಂತೆ ಲಂಚದ ಹಣವನ್ನು ನೀಡಲು ಇಚ್ಛೆ ಇಲ್ಲದ ಕಾರಣ ಆರೋಪಿ ಶ್ರೀ ಎಚ್. ರಾಮಾಂಜನೇಯ ವಿಶೇಷ ಜಿಲ್ಲಾಧಿಕಾರಿ ಬೆಂಗಳೂರು ಜಿಲ್ಲೆ ರವರ ವಿರುದ್ಧ ಕಾನೂನು ರೀತ್ಯ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

6. ಫಿರ್ಯಾದುದಾರರ ದೂರಿನ ಹಿನ್ನೆಲೆಯಲ್ಲಿ ಶ್ರೀ ಕೆ. ರವಿಶಂಕರ್, ಪೋಲೀಸ್ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರರವರು ಶ್ರೀ ಎಚ್. ರಾಮಾಂಜನೇಯ, ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ ರವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7 13(1)ಡಿ ಸಹವಾಚನ ಕಲಂ 13(2)ರ ರೀತ್ಯ ದಿನಾಂಕ 29-11-2010 ರಂದು ಮೊಕದ್ದಮೆ ಸಂ. 56/2010 ರಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

7. ಔಚಿತ್ಯ ಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ, ತನಿಖಾಧಿಕಾರಿಯು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿನಾಂಕ 29-11-2010 ರಂದು ಬೀಸಿದ ಲಂಚದ ಬಲೆಯು ಯಶಸ್ವಿಯಾಗಿರುತ್ತದೆ.

8. ಫಿರ್ಯಾದುದಾರರು ಸಾಕ್ಷಿಯೊಂದಿಗೆ ಆರೋಪಿ-1 ರವರನ್ನು ಅವರ ಕೊಠಡಿಯಲ್ಲಿ ಭೇಟಿ ಮಾಡಿದಾಗ ಅವರು ತಮ್ಮ ಕಛೇರಿಯಲ್ಲಿ ಕುಳಿತಿದ್ದ ಆರೋಪಿ-3 ಶ್ರೀ ನವೀನ್ ಎಂಬುವವರಿಗೆ ಅವರನ್ನು ಕರೆಯಿಸಿ ಎಂದು ತಿಳಿಸಿದ ಮೇರೆಗೆ ಸದರಿಯವರು ತಮ್ಮ ಮೊಬೈಲ್‌ನಿಂದ ಯಾರಿಗೋ ಕರೆ ಮಾಡಿದಾಗ, 5-6 ನಿಮಿಷಗಳಲ್ಲಿ ಅಲ್ಲಿಗೆ ವ್ಯಕ್ತಿಯೊರ್ವರು ಬಂದಿದ್ದು, ಸದರಿಯವರಿಗೆ ಆರೋಪಿ-1 ರವರು ಹಣ ಪಡೆದುಕೊಳ್ಳುವಂತೆ ಕೈ ಸಂಜ್ಞೆ ಮಾಡಿ ಫಿರ್ಯಾದುದಾರರನ್ನು ಕರೆದುಕೊಂಡು ಹೋಗುವಂತೆ ತೆಲುಗು ಭಾಷೆಯಲ್ಲಿ ತಿಳಿಸಿರುತ್ತಾರೆ. ಅದರಂತೆ ಆರೋಪಿ-4 ಶ್ರೀ ಗಂಗಪ್ಪ ಮತ್ತು ಆರೋಪಿ-3 ಶ್ರೀ ನವೀನ್ ರವರುಗಳು ಫಿರ್ಯಾದುದಾರರನ್ನು ಸರ್ಕಾರಿ ಕಾಲೇಜಿನ ಮೈದಾನದ ನಿಲುಗಡೆ ಸ್ಥಳಕ್ಕೆ ಬಂದು ಮಾರುತಿ ಸ್ವಿಫ್ಟ್ ಕಾರು ಸಂ. ಕೆಎ-04-ಎಮ್‌ಜಿ-5475 ರಲ್ಲಿ ಕುಳಿತಿದ್ದ ಆರೋಪಿ-2 ಅವರು ಕಾರಿನಿಂದ ಹೊರಗೆ ಬಂದು ಡಿ.ಸಿ. ಕಛೇರಿಯ ಆವರಣದಲ್ಲಿ ಫಿರ್ಯಾದುದಾರರಿಂದ ಲಂಚದ ಹಣವನ್ನು ತಮ್ಮ ಬಲಗೈನಲ್ಲಿ ಪಡೆದು ಎಡಗೈನಿಂದ ತಾವು ಧರಿಸಿದ್ದ ಪ್ಯಾಂಟಿನ ಬಲಭಾಗದ ಜೇಬಿನಲ್ಲಿಟ್ಟುಕೊಂಡಿರುತ್ತಾರೆ. ನಂತರ ತನಿಖಾ ತಂಡದವರು ಆರೋಪಿ-2 ಶ್ರೀ ವೆಂಕಟೇಶ್ ಬಾಬು, ಆರೋಪಿ-3 ಶ್ರೀ ನವೀನ್ ಮತ್ತು ಆರೋಪಿ-4 ಶ್ರೀ ಗಂಗಪ್ಪ ರವರುಗಳನ್ನು ಹಿಡಿದುಕೊಂಡಿರುತ್ತಾರೆ. ನಂತರ ತನಿಖಾಧಿಕಾರಿಗಳು ಆರೋಪಿ-2 ರವರು ಕುಳಿತಿದ್ದ ಕಾರನ್ನು ಶೋಧಿಸಿದಾಗ, ಕೆಲವು ದಾಖಲಾತಿಗಳು ಹಾಗೂ ಸದರಿ ಕಾರಿನ ಡ್ಯಾಷ್ ಬೋರ್ಡಿನಲ್ಲಿದ್ದ ರೂ. 45,420/- ಗಳು ದೊರೆತಿದ್ದು ಅವುಗಳನ್ನು ವಶಪಡಿಸಿಕೊಂಡಿರುತ್ತಾರೆ.

9. ಆರೋಪಿ-1 ರವರು ತಿಳಿಸಿದಂತೆ ಲಂಚದ ಹಣವನ್ನು ಪಡೆದ ಆರೋಪಿ-2 ಶ್ರೀ ವೆಂಕಟೇಶ್ ಬಾಬು ರವರ ಎರಡೂ ಕೈ ಬೆರಳುಗಳನ್ನು ಸೋಡಿಯಂ ಕಾರ್ಬನೇಟ್ ದ್ರಾವಣಗಳಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ ಬಣ್ಣ ರಹಿತವಾದ ದ್ರಾವಣಗಳು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತವೆ. ಆರೋಪಿ-1 ರವರ ಪರವಾಗಿ ಆರೋಪಿ-2 ರವರು ಫಿರ್ಯಾದುದಾರರಿಂದ ಪಡೆದ ಲಂಚದ ಹಣವನ್ನು ತಾವು ಧರಿಸಿದ್ದ ಪ್ಯಾಂಟಿನ ಎಡಭಾಗದ ಜೇಬಿನಲ್ಲಿಟ್ಟುಕೊಂಡು ಅದನ್ನು ಯಥಾರೀತಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

10. ಆರೋಪಿ ಫಿರ್ಯಾದುದಾರರ ನಡುವೆ ನಡೆದಿರುವ ವಿದ್ಯಮಾನಗಳನ್ನು ನೆರಳು ಸಾಕ್ಷಿ ಹಾಗೂ ಸಾಂದರ್ಭಿಕ ಸಾಕ್ಷಿಗಳು ಗಮನಿಸಿದ್ದು ಮಹಜರು ಸಮಯದಲ್ಲಿ ಹೇಳಿಕೆಯನ್ನು ನೀಡಿರುತ್ತಾರೆ. ಆರೋಪಿ-1 ಶ್ರೀ ರಾಮಾಂಜನೇಯ ಹಿಂದಿನ ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ನಗರ, ಆರೋಪಿ-2, ಶ್ರೀ ವೆಂಕಟೇಶ್ ಬಾಬು, ಆರೋಪಿ-3 ಶ್ರೀ ನವೀನ್ ಹಾಗೂ ಆರೋಪಿ-4 ಶ್ರೀ ಗಂಗಪ್ಪ (ಖಾಸಗಿ ವ್ಯಕ್ತಿಗಳು) ರವರುಗಳನ್ನು ದಿನಾಂಕ 29-11-2010 ರಂದು ದಸ್ತಗಿರಿ ಮಾಡಿ, ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗಿದ್ದು, ನ್ಯಾಯಾಧೀಶರ ಆದೇಶದಂತೆ ಆರೋಪಿತರುಗಳನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದ್ದು, ಆರೋಪಿತರುಗಳು ನ್ಯಾಯಾಲಯದ ಜಾಮೀನಿನ ಮೇಲೆ ಬಿಡುಗಡೆಯಾಗಿರುತ್ತಾರೆ.

11. ಸದರಿ ಪ್ರಕರಣದಲ್ಲಿ ಶ್ರೀ ಎಚ್. ರಾಮಾಂಜನೇಯ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ರವರು ಶ್ರೀ ಸಿ. ನಾರಾಯಣಸ್ವಾಮಿ, ಬಂಗ್ಲಾಪೇಟೆ ಬೊಮ್ಮಸಂದ್ರ ಇವರು ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ತಿಮ್ಮಸಂದ್ರ ಗ್ರಾಮದ ಸರ್ವೆ ನಂ. 23/1ರಲ್ಲಿ 3-10 ಎಕರೆ ಮತ್ತು 1 ಗುಂಟೆ ಕರಾಬು ಒಟ್ಟು 3-11 ಎಕರೆ ಸರ್ವೆ ನಂ. 23/2 ರಲ್ಲಿ 1-10 ಎಕರೆ ಮತ್ತು ಸರ್ವೆ ನಂ. 26 ರಲ್ಲಿ 0.33 ಗುಂಟೆ ಒಟ್ಟು 5 ಎಕರೆ 14 ಗುಂಟೆ ಜಮೀನುಗಳನ್ನು 2006ರಲ್ಲಿ ಸ್ವಯಾರ್ಜಿತವಾಗಿ ಖರೀದಿಸಿದ್ದು ಸದರಿ ಜಮೀನುಗಳು ಕೈಗಾರಿಕಾ ವಲಯ ವ್ಯಾಪ್ತಿಗೊಳಪಟ್ಟಿದ್ದು ಇವುಗಳು ಕೈಗಾರಿಕಾ ಉದ್ದೇಶಕ್ಕಾಗಿ ಭೂ ಪರಿವರ್ತನೆ ಮಾಡಲು ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ರೂ. 2.00 ಲಕ್ಷದ ಲಂಚದ ಹಣವನ್ನು ಡಿ.ಡಿ. ರೂಪದಲ್ಲಿ ನೀಡುವಂತೆ ಒತ್ತಾಯ ಮಾಡುತ್ತಿದ್ದಾರೆಂಬ ಬಗ್ಗೆ ತನಿಖಾ ವರದಿಯಿಂದ ಸ್ಪಷ್ಟವಾಗುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮರ್ಥನೀಯ ವಿವರಣೆ ನೀಡಿರುವುದಿಲ್ಲ.

12. ಆದ್ದರಿಂದ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ. ಆದುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅವಶ್ಯಕವೆಂದು ಅಭಿಪ್ರಾಯ ಪಡಲಾಗಿದೆ.

13. ಮೇಲಿನ ಕಾರಣಗಳಿಂದ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7 13(1)(ಡಿ)ರ ಜೊತೆ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಹಾಗೂ ಸಂಪೂರ್ಣವಾಗಿ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಡಿ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯವೆಂದು ಮನಗಂಡಿದೆ.

14. ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರ ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ಅಡಿಯಲ್ಲಿ ಆಪಾದಿತ ಅಧಿಕಾರಿ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಕೆಇವಿ 10, ಬೆಂಗಳೂರು, ದಿನಾಂಕ: 05-02-2011**

ಆರೋಪಿಯಾದ ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರನ್ನು ಹುದ್ದೆಯಿಂದ ತೆಗೆದು ಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಎಚ್. ರಾಮಾಂಜನೇಯ, ಕೆ.ಎ.ಎಸ್.

(ಹಿರಿಯ ಶ್ರೇಣಿ) ಅಧಿಕಾರಿ ಹಿಂದಿನ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ (ಹಾಲಿ ಅಮಾನತ್ತಿನಲ್ಲಿರುವ) ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977ರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ 05–02–2011 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಎಂ. ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. ನಂ. 397 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು)

## HORTICULTURE SECRETARIAT

**Sub :-** "Scheme for Integrated Farming in Coconut for Productivity/Improvement with Coconut Development Board Assistance (100% CDB)"-Release of funds-reg.

**Read :-**
1) Government Order No. HCD 51 HPP 2010, dated 10-06-2010
2) Government Order No. HCD 51 HPP 2010, dated 03-07-2010
3) Government Order No. HCD 51 HPP 2010, dated 12-08-2010
4) Government Order No. HCD 51 HPP 2010, dated 08-12-2010
5) CDB letter No. 597/2009 DEV (Kar) dated 07-01-2011
6) Letter of Director of Horticulture No. ತೋಇ/ತೋಬೆ/ಸತೋಅ-2/14-2010-11, dated 20-01-2011

***

**Preamble:-**

State Level Administrative approval was accorded for implementing the Coconut Development Board programme during 2010-11 with a total financial outlay of Rs. 709.29 lakhs vide Government Order read at (1) above. Out of this Rs. 356.25 lakhs to be implemented by Department of Horticulture and Rs. 353.04 lakhs by Coconut Development Board directly out of Rs. 356.25 lakhs the State share is Rs. 3.125 lakhs and Coconut development Board share has been Rs. 353.125 lakhs.

During 2010-11. Coconut Development Board has so far released the following funds:

| Sl. No. | D. D. No. | Amount in Rs. |
|---|---|---|
| 1 | D. D. No. 069247, dated 23-06-2010 | 2,46,72,000/- |
| 2 | D. D. No.71334 dated 22-10-2010 | 1,56,250/- |
| 3 | D.D. No. 992559 to 992567 dated 05-01-2011 | 87,50,000/- |
| | Total | 3,35,78,250 |

Accordingly, an amount Rs. 175.00 lakhs Rs. 87.09 lakhs and Rs. 1.56 lakhs were released to Director of Horticulture under the "Scheme for Integrated Farming in Coconut for Productivity/Improvement with Coconut Development Board Assistance (100%CDB)" vide Government Orders read at (2), (3) and (4) above.

Coconut Development Board vide its letter read at (5) above has released an amount of Rs. 87,50,000/- to the Secretary, Horticulture through 9 Demand Drafts No. 992559 to 992567 dated 05-01-2011 for covering 500 hectares.

| Particulars | Amount (Rs.) |
|---|---|
| Integrated Farming in Coconut holdings for productivity improvement in Karnataka State Laying out of demonstration plots (500 ha.New) | 87,50,000/- |

The Director of Horticulture has requested to release an amount of Rs. 87,50,000 for implementation of the Coconut development Board programme vide letter read at (6) above.

This has been examined and hence this Order:

**Government Order No.: HCD 51 HPP 2010, Bangalore, Dated 03-02-2011**

Government sanction is hereby accorded to release an amount of Rs. 87,50,000 (Rupees Eighty Seven Lakhs Fifty Thousand only) to the Director of Horticulture under the "Scheme for Integrated Farming in Coconut for Productivity/Improvement in the State-Laying out of demonstration plots (500 ha. New)" during 2010-11 under the Head of Account 2401-00-108-2-35-100 (Financial Assistance/Relief) towards 100% Coconut Development Board share.

This order is issued with the concurrence by the Internal Financial Advisor Agriculture and Horticulture Department vide Note vÉÆÃE 23 DAD¸À 2010, dated 01-02-2011.

By Order and in the name of the Governor of Karnataka

**B. C. Prakash**

Under Secretary to Government

PR. No. 398 Horticulture Department

## ವಸತಿ ಸಚಿವಾಲಯ

**ವಿಷಯ** : ಪುತ್ತೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999, ದಿನಾಂಕ 10–05–2000

***

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 99 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 29–01–2011**

ಪುತ್ತೂರು ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಮದಾಸ್ ಎ. ಬಿನ್ ಗಣಪತಿ ಆಚಾರ್ಯ, ಪದ್ಮಕುಸುಮ ಹಾರಾಡಿ, ಪುತ್ತೂರು | ಸಾಮಾನ್ಯ |
| 2 | ಶ್ರೀ ಬಿ. ವಿಶ್ವನಾಥ್ ಕುಲಾಲ್ ಬಿನ್ ಮುತ್ತಪ್ಪ ಕುಲಾಲ್, ಬೆಳ್ಯಾಣ ಮನೆ, ಆರ್ಯಾಪು ಅಂಚೆ, ಪುತ್ತೂರು. | ಹಿಂದುಳಿದ ವರ್ಗ |
| 3 | ಶ್ರೀಮತಿ ಮೋಹಿನಿ ನಾಯ್ಕ ಕೋಂ ಪರಮೇಶ್ವರ ನಾಯ್ಕ, ಪದವು ಮನೆ, ಬಲ್ನಾಡು ಗ್ರಾಮ, ಪುತ್ತೂರು ತಾಲ್ಲೂಕು. | ಪರಿಶಿಷ್ಟ ಜಾತಿ (ಮಹಿಳೆ) |
| 4 | ಶ್ರೀ ಜೀವನ್‌ಧರ್ ಜೈನ್ ಬಿನ್ ಯುವರಾಜ್ ಹೆಗ್ಡೆ, ನೆಲಪ್ಪಾಲ, ಪಡ್ನೂರು ಅಂಚೆ, ಪುತ್ತೂರು. | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. ನಂ. 399

## ವಸತಿ ಸಚಿವಾಲಯ

**ವಿಷಯ** : ಸೂಳ್ಯ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999, ದಿನಾಂಕ 10–05–2000

***

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಸೂಳ್ಯ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 100 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 29–01–2011**

ಸೂಳ್ಯ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಬಾಲಕೃಷ್ಣ ರೈ, ದುಗ್ಗಲಡ್ಕ ಮನೆ, ದುಗ್ಗಲಡ್ಕ ಅಂಚೆ, ಸೂಳ್ಯ | ಸಾಮಾನ್ಯ |
| 2 | ಶ್ರೀ ಐ. ವಿ. ಚಂದ್ರಶೇಖರ್ ಬಿನ್ ಬೋಜಪ್ಪ, ಜಟ್ಟಿಪಳ್ಳ ಅಂಚೆ, ಸೂಳ್ಯ | ಹಿಂದುಳಿದ ವರ್ಗ |
| 3 | ಶ್ರೀಮತಿ ಶಾಂತಿ ಬಿನ್ ಹರಿಶ್ಚಂದ್ರ, ನಾವೂರು, ಸೂಳ್ಯ | ಪರಿಶಿಷ್ಟ ಜಾತಿ (ಮಹಿಳೆ) |
| 4 | ಶ್ರೀ ಪ್ರಕಾಶ್ ಹೆಗ್ಡೆ ಬಿನ್ ರತ್ನಾಕರ ಹೆಗ್ಡೆ, ಹಳೇ ಗೇಟು, ಸೂಳ್ಯ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2,

ವಸತಿ ಇಲಾಖೆ

ಪಿ.ಆರ್. ನಂ. 400

## ವಸತಿ ಸಚಿವಾಲಯ

**ವಿಷಯ** : ಮಂಗಳೂರು ನಗರ ದಕ್ಷಿಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ 10–05–2000

***

**ಪ್ರಸ್ತಾವನೆ :**

ಸರ್ಕಾರವು ನಗರ ಅಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ದಕ್ಷಿಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 54 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 29–01–2010**

ಮಂಗಳೂರು ನಗರ ದಕ್ಷಿಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಎಂ. ಗಣೇಶ ಮಲ್ಲಿ, ಗಣೇಶ ಕೃಪ, ಎಲ್ಲೆದಡಿ, ಮರಕಡ ಕುಂಜತ್‌ಬೈಲು, ಮಂಗಳೂರು. | ಸಾಮಾನ್ಯ |
| 2 | ಶ್ರೀ ಶ್ರೀಧರ ಭಂಡಾರಿ, ಭಂಡಾರಿ ಮನೆ, ಕಣ್ಣೂರು, ಮಂಗಳೂರು | ಹಿಂದುಳಿದ ವರ್ಗ |
| 3 | ಶ್ರೀ ರಾಕೇಶ್, ಬಾಬು ಕಂಪೌಂಡ್, ಕೊಟ್ಟಾರ ಕ್ರಾಸ್ ರಸ್ತೆ, ಕಾಫಿ ಕಾಡ್, ಬಿಜೈ ಅಂಚೆ, ಮಂಗಳೂರು 575002 | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಪ್ರಭಾಮಾಲಿನಿ ಶ್ವೇತ ಮನೆ, ಪಿಂಟೊ ಕಾಂಪೌಂಡ್, ನಾಗುರಿ ಕಂಕನಾಡಿ, ಮಂಗಳೂರು | ಅಲ್ಪಸಂಖ್ಯಾತರು (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. ನಂ. 401 ಪೀಠಾಧಿಕಾರಿ–2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ** : ಹುಮ್ನಾಬಾದ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ 10–05–2000

***

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೀದರ್ ಜಿಲ್ಲೆಯ ಹುಮ್ನಾಬಾದ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 47 ಹೆಚ್‌ಎಎಸ್ 2008, ಬೆಂಗಳೂರು, ದಿನಾಂಕ: 29–01–2011**

ಹುಮ್ನಾಬಾದ್ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಅಶೋಕ್ ಬಿನ್ ಕಾಶೆಪ್ಪ ಸಿದ್ದೇಶ್ವರ, ಗಾದಾಗಲ್ಲಿ, ಮನೆ ನಂ. 6–82, ಹುಮ್ನಾಬಾದ್ | ಸಾಮನ್ಯ |
| 2 | ಶ್ರೀ ಅಬ್ದುಲ್ ಸತ್ತಾರ ಬಿನ್ ಅಬ್ದುಲ್ ರಜಾಕ್, ನೂರಾಕಾನ ಆಖಾಡಾ ಮನೆ ನಂ. 18/52, ಹುಮನಾಬಾದ್ | ಅಲ್ಪಸಂಖ್ಯಾತರು |
| 3 | ಶ್ರೀ ರಾಜಕುಮಾರ ಬಿನ್ ವೀರಪ್ಪ, ಬಾಚಪಳ್ಳಿ ಹುಮ್ನಾಬಾದ್ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಉಮಾದೇವಿ ಕೋಂ ಭುಜಂಗರಾವ, ಜೈನ್ ಗಲ್ಲಿ ಹುಮ್ನಾಬಾದ್ | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. ನಂ. 402 ಪೀಠಾಧಿಕಾರಿ–2, ವಸತಿ ಇಲಾಖೆ

**ವಸತಿ ಸಚಿವಾಲಯ**

**ವಿಷಯ** : ಚಿಕ್ಕನಾಯಕನಹಳ್ಳಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ 10–05–200

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 216 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 29–01–2011**

ಚಿಕ್ಕನಾಯಕನಹಳ್ಳಿ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಕೆಂಪಮ್ಮ ಕೋಂ ವಿಶ್ವನಾಥ್, ಜೋಗಿಹಳ್ಳಿ ಚಿಕ್ಕನಾಯಕನಹಳ್ಳಿ ತಾಲ್ಲೂಕು | ಪರಿಶಿಷ್ಟ ಜಾತಿ (ಮಹಿಳೆ) |
| 2 | ಶ್ರೀ ಮೇರುನಾಥ್ ಬಿನ್ ರಾಮನಾಥ್, ಬ್ರಾಹ್ಮಣರ ಬೀದಿ, ಚಿಕ್ಕನಾಯಕನಹಳ್ಳಿ | ಹಿಂದುಳಿದ ವರ್ಗ |
| 3 | ಶ್ರೀ ಸಿ.ಎಂ. ಜಾಕೀರ್ ಹುಸೇನ್ ಬಿನ್ ಮಹಮ್ಮದ್ ಬಾಷ, ದೇವಾಂಗ ಬೀದಿ, ಚಿಕ್ಕನಾಯಕನಹಳ್ಳಿ | ಅಲ್ಪಸಂಖ್ಯಾತರು |
| 4 | ಶ್ರೀ ಸಿ.ಎಂ. ಗಂಗಾಧರ ಬಿನ್ ಮುದಲಿಂಗಯ್ಯ, ಕನಕದಾಸನಗರ, ರಾಮಮಂದಿರ ರಸ್ತೆ, ಚಿಕ್ಕನಾಯಕನಹಳ್ಳಿ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. ನಂ. 403 ಪೀಠಾಧಿಕಾರಿ–2, ವಸತಿ ಇಲಾಖೆ

**ವಸತಿ ಸಚಿವಾಲಯ**

**ವಿಷಯ** : ಮದ್ದೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ 10–05–2000

***

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಮಂಡ್ಯ ಜಿಲ್ಲೆಯ ಮದ್ದೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 177 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 29–01–2011**

ಮದ್ದೂರು ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಅಂಕಪ್ಪ, 8ನೇ ಅಡ್ಡರಸ್ತೆ, ವಿ.ವಿ. ನಗರ ಮದ್ದೂರು | ಸಾಮಾನ್ಯ |
| 2 | ಶ್ರೀಮತಿ ಕಮರುನ್ನಿಸಾ ಬೇಗಂ ಕೋಂ ಪಾಷಾ, ಚನ್ನೇಗೌಡ ಬಡಾವಣೆ, ಮದ್ದೂರು | ಅಲ್ಪಸಂಖ್ಯಾತರು (ಮಹಿಳೆ) |
| 3 | ಶ್ರೀ ನಾಗಪ್ಪ ಬಿನ್ ಲೇಟ್ ಹನುಮಂತಪ್ಪ, ರಾಮ್‌ರಹೀಂ ನಗರ, ಮದ್ದೂರು | ಹಿಂದುಳಿದ ವರ್ಗ |
| 4 | ಶ್ರೀ ವಿ. ಶ್ರೀನಿವಾಸ್ ಬಿನ್ ವೆಂಕಟಶೆಟ್ಟಿ 3ನೇ ಅಡ್ಡರಸ್ತೆ, ಲೀಲಾವತಿ ಬಡಾವಣೆ ಮದ್ದೂರು | ಪರಿಶಿಷ್ಟ ಜಾತಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. ನಂ. 404 ಪೀಠಾಧಿಕಾರಿ–2, ವಸತಿ ಇಲಾಖೆ

## ಯುವಜನ ಸೇವಾ ಸಚಿವಾಲಯ

**ವಿಷಯ** : ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ಸೃಜಿಸಲಾದ ಜಂಟಿ ನಿರ್ದೇಶಕರ 5 ಹುದ್ದೆಗಳನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ : ವಾಪ್ರಯು 105 ಯುಇಸೇ 95, ದಿ : 20-02-1996.
2) ಅಧಿಸೂಚನೆ ಸಂಖ್ಯೆ: ವಾಪ್ರಯು 105 ಯುಇಸೇ 94, ದಿ: 12-03-1996.
3) ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 47 ಯುಇಸೇ 2010, ದಿ : 23-07-2010.
4) ನಡವಳಿ ಸಂಖ್ಯೆ: ಸಿಆಸುಇ 40 ಆಕಾಅ 2010, ದಿ: 20-11-2010.

**ಪ್ರಸ್ತಾವನೆ :**

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿದ್ದ 06 ಉಪ ನಿರ್ದೇಶಕರ ಹುದ್ದೆಗಳ ಪೈಕಿ 05 ಉಪ ನಿರ್ದೇಶಕರ ಹುದ್ದೆಗಳನ್ನು ಮೇಲೆ (1) ರಲ್ಲಿ ಓದಲಾದ ದಿ: 20-02-1996ರ ಸರ್ಕಾರಿ ಆದೇಶದಲ್ಲಿ ವೇತನ ಶ್ರೇಣಿ 3300-5300ದ ಜಂಟಿ ನಿರ್ದೇಶಕರ ಹುದ್ದೆಗೆ ಸಮಾನಾಂತರವಾಗಿ ಉನ್ನತೀಕರಿಸಲಾಯಿತು. ಆನಂತರ ಮೇಲೆ (2) ರಲ್ಲಿ ಓದಲಾದ ದಿ: 12-03-1996 ರ ಅಧಿಸೂಚನೆಯಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಈ ಕೆಳಕಂಡ ಉಪ ನಿರ್ದೇಶಕರನ್ನು ಇಲಾಖಾ ಮುಂಬಡ್ತಿ ಸಮಿತಿಯ ನಿರ್ಣಯದ ಅನುಸಾರ ಬಡ್ತಿಗೆ ಅರ್ಹರಿದ್ದು, 5 ಅಧಿಕಾರಿಗಳನ್ನು ಉನ್ನತೀಕರಿಸಲ್ಪಟ್ಟ ಜಂಟಿ ನಿರ್ದೇಶಕರ ಹುದ್ದೆಗಳಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರನ್ವಯ ಸ್ವತಂತ್ರ ಪ್ರಭಾರದಲ್ಲಿಡಲಾಯಿತು:

1. ವೈ. ಆರ್. ಕಾಂತರಾಜೇಂದ್ರ
2. ಸಿ.ಜಿ. ಶೆಟ್ಟರ್
3. ಎಂ.ಎಸ್. ಲಲಿತ
4. ಏಜಾಜ್ ಅಲಿ
5. ಎಸ್. ಲಲಿತಮ್ಮ

ಆನಂತರ ಉನ್ನತೀಕರಿಸಲ್ಪಟ್ಟ ಜಂಟಿ ನಿರ್ದೇಶಕರ 05 ಹುದ್ದೆಗಳನ್ನು ಕಾಲದಿಂದ ಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು ಅಂತಿಮವಾಗಿ ಮೇಲೆ (3) ರಲ್ಲಿ ಓದಲಾದ ದಿ: 23.07.2010 ರ ಸರ್ಕಾರಿ ಆದೇಶದಲ್ಲಿ ಮೂರು ಹುದ್ದೆಗಳನ್ನು ದಿ: 31-03-2011 ರವರೆಗೆ ಮುಂದುವರೆಸಲಾಗಿದೆ. ಈ ಮಧ್ಯೆ ವಿಭಾಗೀಯ ಕಛೇರಿಗಳ ರದ್ಧತಿ, ನೀತಿ ನಿರ್ಧಾರದ ಪರಿಣಾಮವಾಗಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ 4 ವಿಭಾಗೀಯ ಕಛೇರಿಗಳನ್ನು ಹಾಗೂ ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಧಿಕಾರಿ/ನೌಕರರುಗಳ ಹುದ್ದೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ವಾಪ್ರಯು 51 ಸಮನ 2001 (ಭಾ), ದಿ. 01-10-2004 ರಲ್ಲಿ ರದ್ದುಪಡಿಸಿದ ಕಾರಣ ಜಂಟಿ ನಿರ್ದೇಶಕರ ಮೂರು ಹುದ್ದೆಗಳು ರದ್ದಾದವು ಈ ಕಾರಣದಿಂದಾಗಿ ಸ್ವತಂತ್ರ ಪ್ರಭಾರದಲ್ಲಿದ್ದ ಈ ಅಧಿಕಾರಿಗಳನ್ನು ಸಕ್ರಮಗೊಳಿಸಲು ಹುದ್ದೆಗಳು ಲಭ್ಯವಿರಲಿಲ್ಲ. ಇದರಿಂದ ಬಾಧಿತರಾದ ಸದರಿ ಅಧಿಕಾರಿಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 5682-85/1998 ಸಲ್ಲಿಸಿ ಪೂರ್ವಾನ್ವಯ ಬಡ್ತಿ ನೀಡುವಂತೆ ಪ್ರಾರ್ಥಿಸಿದರು. ಮಂಡಳಿಯು ದಿ: 23-02-2007ರ ಆದೇಶ ನೀಡಿ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆಯನ್ನು 3 ತಿಂಗಳೊಳಗಾಗಿ ಪೂರೈಸಿ ಅರ್ಜಿದಾರರು ಅರ್ಹರಿದ್ದಲ್ಲಿ ಅವರುಗಳನ್ನು ಸ್ವತಂತ್ರ ಪ್ರಭಾರದಲ್ಲಿಟ್ಟ ದಿನಾಂಕದಿಂದಲೇ ಜಂಟಿ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿತು. ಇದರ ನಂತರ 3 ವರ್ಷಗಳು ಕಳೆದರೂ ಸಹ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಆಗದೆ ಬಡ್ತಿ ದೊರೆಯದ ಕಾರಣ ಸೇವೆಯಲ್ಲಿದ್ದ ಮೂವರು ಅಧಿಕಾರಿಗಳು ನ್ಯಾಯ ಮಂಡಳಿಯು ನೀಡಿದ ದಿ: 23-02-2007 ರ ಆದೇಶವನ್ನು ಅನುಷ್ಠಾನಗೊಳಿಸಿಲ್ಲವೆಂದು ಆರೋಪಿಸಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 198-200/2010 ಅನ್ನು ಮಂಡಳಿಯ ಮುಂದೆ ಹೂಡಿದರು. 3 ವರ್ಷಗಳ ನಂತರವು ತನ್ನ ಆದೇಶವು ಅನುಷ್ಠಾನಗೊಳ್ಳದಿರುವುದನ್ನು ತೀವ್ರವಾಗಿ ಪರಿಗಣಿಸಿದ ನ್ಯಾಯ ಮಂಡಳಿಯು ಸರ್ಕಾರಕ್ಕೆ ತೀಕ್ಷ್ಣವಾದ ನಿರ್ದೇಶನ ನೀಡಿ ತನ್ನ ದಿ: 23-02-2007ರ ಆದೇಶದ ಪಾಲನೆ ಬೆಳವಣಿಗೆಯನ್ನು ಪ್ರತಿ 15 ದಿನಗಳಿಗೊಮ್ಮೆ ಪರಾಮರ್ಶಿಸುತ್ತಿದೆ. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ದಿ: 01-04-2000 ರಂದು ಖಾಲಿ ಇದ್ದ ಹುದ್ದೆಗಳ ಪೈಕಿ ಶೇ. 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಸಂಬಂಧ ನಿರ್ಣಯ ಕೈಗೊಳ್ಳುವ ಸಲುವಾಗಿ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿ: 11-11-2010 ರಂದು ಜರುಗಿದ ಅಧಿಕಾರಯುತ ಸಮಿತಿಯು ಪ್ರಸ್ತುತ ನಿಯಮ 32 ರಲ್ಲಿ ಸ್ವತಂತ್ರ ಪ್ರಭಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳನ್ನು ಕ್ರಮಬದ್ಧಗೊಳಿಸುವ ದೃಷ್ಟಿಯಿಂದ ಜಂಟಿ ನಿರ್ದೇಶಕರ ಹುದ್ದೆಗಳನ್ನು ಅವರುಗಳಿಗೆ ಸಂಬಂಧಪಟ್ಟಂತೆ ಮಾತ್ರ ಅವರುಗಳು ಸೇವೆಯಲ್ಲಿರುವವರೆಗೆ ಮುಂದುವರೆಸಲು ತೀರ್ಮಾನಿಸಿತು. ಸಮಿತಿಯ ನಿರ್ಣಯವು ಈ ಕೆಳಕಂಡಂತಿದೆ:-

**(ಅ) ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರುವ ಪ್ರಕ್ರಿಯೆಯನ್ನು ಕಾಯ್ದಿಟ್ಟು, ಉನ್ನತೀಕರಿಸಲ್ಪಟ್ಟ 05 ಜಂಟಿ ನಿರ್ದೇಶಕರ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ದಿನಾಂಕದಿಂದ ಪ್ರಸಕ್ತ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಅವರುಗಳು ಉನ್ನತೀಕರಿಸಿದ ಜಂಟಿ ನಿರ್ದೇಶಕರ ಹುದ್ದೆಯಲ್ಲಿ ಇರುವವರೆಗೆ ಮಾತ್ರ ಅವರ ಸೇವೆಯನ್ನು ಜಂಟಿ ನಿರ್ದೇಶಕರ ಹುದ್ದೆಗಳಲ್ಲಿ ಕ್ರಮಬದ್ಧಗೊಳಿಸುವುದು. ಪ್ರಸಕ್ತ ಅಧಿಕಾರಿಗಳ ನಿವೃತ್ತಿ ನಂತರ ಉನ್ನತೀಕರಿಸಲ್ಪಟ್ಟ ಜಂಟಿ ನಿರ್ದೇಶಕರ ಹುದ್ದೆಗಳು ತಮ್ಮಿಂದ ತಾವೇ ರದ್ದುಗೊಳ್ಳುತ್ತವೆ.**

ಸಮಿತಿಯ ಮೇಲಿನ ನಿರ್ಣಯವನ್ನನುಸರಿಸಿ ಮೇಲೆ (4)ರಲ್ಲಿ ಓದಲಾದ ದಿ: 20-11-2010ರ ನಡವಳಿಗಳನ್ನು ಹೊರಡಿಸಲಾಯಿತು. ಅದರಂತೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ಮುಂದುವರೆಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 101 ಯುಇಸೇ 2004, ಬೆಂಗಳೂರು, ದಿನಾಂಕ: 31-12-2010**

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ದಿ: 20-02-1996 ರ ಸರ್ಕಾರಿ ಆದೇಶದಲ್ಲಿ ಉನ್ನತೀಕರಿಸಲಾದ ಜಂಟಿ ನಿರ್ದೇಶಕರ 05 ಹುದ್ದೆಗಳು, ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು ನಿವೃತ್ತಿ ಹೊಂದುವ ದಿನಾಂಕದವರೆಗೆ ಜಾರಿಯಲ್ಲಿರುತ್ತವೆ ಎಂದು ಸರ್ಕಾರವು ಆದೇಶಿಸುತ್ತದೆ. ಅಧಿಕಾರಿಗಳ ನಿವೃತ್ತಿಯ ನಂತರ ಸದರಿ ಹುದ್ದೆಗಳು ತಮ್ಮಿಂದ ತಾವೇ ರದ್ದುಗೊಳ್ಳುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

ಪಿ.ಆರ್. ನಂ. 405

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀಮತಿ ಸರೋಜ, ರೇಷ್ಮೆ ಪ್ರವರ್ತಕರು ಇವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ

**ಓದಲಾಗಿದೆ :** 1. ಅಧಿಕೃತ ಜ್ಞಾಪನ ಸಂಖ್ಯೆ: ಸಿ1(5)/ರೇಪ್ರವ/ಪಪೂಅ/38/2008-09, ದಿನಾಂಕ: 7-9-2010.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ1(5)/ರೇಪ್ರವ/ಪಪೂಅ/38/2008-09, ದಿನಾಂಕ: 7-9-2010.

**ಪ್ರಸ್ತಾವನೆ:**

ಶ್ರೀಮತಿ ಸರೋಜ, ರೇಷ್ಮೆ ಪ್ರವರ್ತಕರು, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು ಇವರು ರೇಷ್ಮೆ ಪ್ರವರ್ತಕರ ಹುದ್ದೆಗೆ ನೇಮಕಗೊಂಡು ದಿನಾಂಕ: 25-1-2003 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 24-1-2005 ರಂದು ಘೋಷಿಸಬೇಕಾಗಿತ್ತು. ಆದರೆ ಸದರಿಯವರು ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ನಿಗದಿತ ಅವಧಿಯಲ್ಲಿ ಪಾಸು ಮಾಡಿಕೊಳ್ಳದೇ ಪರೀಕ್ಷೆಯನ್ನು ದಿ: 2-8-2007 ರಂದು ಪಾಸು ಮಾಡಿಕೊಂಡಿರುತ್ತಾರೆ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(ii) ರನ್ವಯ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 25-1-2005 ರಿಂದ 24-1-2006ರವರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ವಿಸ್ತರಿಸಿ ಆದೇಶಿಸಿದ್ದು, ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 25-1-2006 ರಿಂದ 2-8-2007ರವರೆಗೆ ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಕೋರಿಕೆಯಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿದ್ದು, ನೌಕರರ ಕಾರ್ಯನಿರ್ವಹಣೆಯು ತೃಪ್ತಿಕರವಾಗಿದ್ದು, ನೌಕರರು ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಅವರು ಪಾಸು ಮಾಡಿದ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 136 ರೇಇವಿ 2010, ಬೆಂಗಳೂರು, ದಿನಾಂಕ: 02-02-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಸರೋಜ, ರೇಷ್ಮೆ ಪ್ರವರ್ತಕರು, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)( i)ರನ್ವಯ ದಿನಾಂಕ: 25-1-2006 ರಿಂದ 2-8-2007 ರವರೆಗೆ ವಿಸ್ತರಿಸಿದೆ.

ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 10 ರನ್ವಯ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಘೋಷಿಸಿದ ನಂತರ ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 406

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಸುಬ್ರಮಣ್ಯ ಎಜುಕೇಶನ್ ಸೊಸೈಟಿ (ರಿ), ಕವಲಕ್ಕಿ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಈ ಆಡಳಿತ ಮಂಡಳಿಯ ವತಿಯಿಂದ ನಡೆಯುತ್ತಿರುವ ಸುಬ್ರಮಣ್ಯ ಪದವಿ ಪೂರ್ವ ಕಾಲೇಜು, ಕವಲಕ್ಕಿ ಈ ಕಾಲೇಜಿಗೆ ವಿಶೇಷಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಂಗಳೂರು ಇವರ ಪತ್ರ ಸಂ.ಪಪೂಶಿಇ/ಕ್ಯೂಕ್ಯೂ-033/2007-08 ದಿನಾಂಕ: 19-10-2010.

2) ಅಧ್ಯಕ್ಷರು, ಶ್ರೀ ಸುಬ್ರಮಣ್ಯ ಎಜುಕೇಶನ್ ಸೊಸೈಟಿ (ರಿ), ಕವಲಕ್ಕಿ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರಿಗೆ ನೀಡಲಾದ ಕಾರಣ ಕೇಳುವ ಸೂಚನಾ ಪತ್ರ ಸಂ.ಇಡಿ 223 ಎಸ್‌ಓಹೆಚ್ 2007 ದಿನಾಂಕ 23-12-2010.

3) ಉಪಾಧ್ಯಕ್ಷರು, ಶ್ರೀ ಸುಬ್ರಮಣ್ಯ ಎಜುಕೇಶನ್ ಸೊಸೈಟಿ (ರಿ), ಕವಲಕ್ಕಿ ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರ ಲಿಖಿತ ಹೇಳಿಕೆ ದಿನಾಂಕ: 04-01-2011.

**ಪ್ರಸ್ತಾವನೆ:**

ಶ್ರೀ ಸುಬ್ರಮಣ್ಯ ಎಜುಕೇಶನ್ ಸೊಸೈಟಿ (ರಿ), ಕವಲಕ್ಕಿ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಈ ಆಡಳಿತ ಮಂಡಳಿಯ ವತಿಯಿಂದ ನಡೆಯುತ್ತಿರುವ ಸುಬ್ರಮಣ್ಯ ಪದವಿ ಪೂರ್ವ ಕಾಲೇಜು, ಕವಲಕ್ಕಿ ಇಲ್ಲಿನ ಆಂಗ್ಲಭಾಷಾ ಉಪನ್ಯಾಸಕ ಹುದ್ದೆಗೆ ಆಡಳಿತ ಮಂಡಳಿಯು ಪರಿಶಿಷ್ಟ ಜಾತಿಗೆ ಸೇರಿದ ಶ್ರೀ ಬಿ. ಕೃಷ್ಣ ಇವರನ್ನು 25-9-1997 ರಂದು ನೇಮಕ ಮಾಡಿಕೊಂಡಿದೆ. ಈ ಉಪನ್ಯಾಸಕರ ನೇಮಕಾತಿಯನ್ನು ಸರ್ಕಾರವು ದಿನಾಂಕ 22-3-2000 ರಂದು ಅನುದಾನ ಸಹಿತ ಅನುಮೋದಿಸಿರುತ್ತದೆ. ಸದರಿ ಉಪನ್ಯಾಸಕರ ಖಾಯಂ ಪೂರ್ವ ಸೇವಾವಧಿ ತೃಪ್ತಿಕರವಾಗಿದೆಯೆಂದು ಘೋಷಿಸಿಲ್ಲವೆಂಬ ನೆಪದಿಂದ ಸದರಿ ಉಪನ್ಯಾಸಕರಿಗೆ ಆಡಳಿತ ಮಂಡಳಿ ಏಳು ವರ್ಷಗಳಿಂದ ಯಾವುದೇ ವಾರ್ಷಿಕ ವೇತನ ಬಡ್ತಿ ಮಂಜೂರು ಮಾಡಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಶ್ರೀ ಬಿ. ಕೃಷ್ಣ ಉಪನ್ಯಾಸಕರು ಸರ್ಕಾರದ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರ ಮುಂದೆ ಕರ್ನಾಟಕ ಶಿಕ್ಷಣ ಕಾಯ್ದೆ, 1983ರ ಕಲಂ 131 ಮತ್ತು 133ರಡಿ ಅರ್ಜಿ ಸಂ.37/2002ನ್ನು ಸಲ್ಲಿಸಿದ್ದರು. ಪ್ರಾಧಿಕಾರವು ಸದರಿ ಅರ್ಜಿಯನ್ನು ವಿಚಾರಣೆ ಮಾಡಿ ದಿನಾಂಕ: 30-12-2002ರಂದು ಮೇಲ್ಮನವಿಯನ್ನು ವಿಲೇವಾರಿ ಮಾಡಿ ಸದರಿ ಉಪನ್ಯಾಸಕರಿಗೆ ವಾರ್ಷಿಕ ವೇತನ ಬಡ್ತಿಯನ್ನು ಮಂಜೂರು ಮಾಡಲು ಆದೇಶಿಸಿರುತ್ತದೆ. ಸದರಿ ಆದೇಶದಂತೆ ವಾರ್ಷಿಕ ವೇತನ ಬಡ್ತಿಯನ್ನು ಮಂಜೂರು ಮಾಡದೇ ಸರ್ಕಾರದ ಆದೇಶವನ್ನು ಉಲ್ಲಂಘಿಸಿರುವುದಾಗಿ ಸದರಿ

ಉಪನ್ಯಾಸಕರು ಆಡಳಿತ ಮಂಡಳಿಯನ್ನು ಪ್ರಶ್ನಿಸಿ ಕಾಲೇಜು ಆವರಣದಲ್ಲಿ ಧರಣಿ ನಡೆಸಿದ್ದು, ಆಡಳಿತ ಮಂಡಳಿಯು ಶ್ರೀ ಬಿ. ಕೃಷ್ಣ ಉಪನ್ಯಾಸಕರ ಇದುವರೆಗಿನ ಖಾಯಂ ಪೂರ್ವ ಸೇವಾವಧಿ ತೃಪ್ತಿಕರವಲ್ಲವೆಂದು ತೀರ್ಮಾನಿಸಿ, ದಿನಾಂಕ 22-05-2007 ರಂದು ಸೇವೆಯಿಂದ ಬಿಡುಗಡೆಗೊಳಿಸಿರುತ್ತದೆ. ಈ ರೀತಿ ಅನುದಾನಿತ ಸಿಬ್ಬಂದಿಯನ್ನು ಸೇವೆಯಿಂದ ಬಿಡುಗಡೆ ಮಾಡುವ ಮುನ್ನ ಕರ್ನಾಟಕ ಶಿಕ್ಷಣ ಕಾಯ್ದೆಯ ಕಲಂ 98ರನ್ವಯ ಪದವಿ ಪೂರ್ವ ಶಿಕ್ಷಣ ಇಲಾಖೆಯ ಪೂರ್ವಾನುಮತಿ ಪಡೆಯದೇ ಸದರಿ ಉಪನ್ಯಾಸಕರನ್ನು ಬಿಡುಗಡೆಗೊಳಿಸಿರುವ ಕ್ರಮವು ನಿಯಮಬಾಹಿರವಾಗಿರುವುದರಿಂದ ಅವರನ್ನು ತಕ್ಷಣವೇ ಕರ್ತವ್ಯದ ಮೇಲೆ ಪುನರ್‌ಸ್ಥಾಪಿಸುವಂತೆ ಆದೇಶಿಸಲಾಗಿತ್ತು. ಉಪ ನಿರ್ದೇಶಕರು, ಪದವಿ ಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ, ಉತ್ತರಕನ್ನಡ ಜಿಲ್ಲೆ ಇವರು ದಿನಾಂಕ 21-07-2007ರಂದು ಸದರಿ ಕಾಲೇಜಿಗೆ ಭೇಟಿ ನೀಡಿ ಈ ಉಪನ್ಯಾಸಕರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳಲು ಆದೇಶಿಸಿದ್ದರು. ಆದರೆ, ಆಡಳಿತ ಮಂಡಳಿಯು ಸದರಿ ಉಪನ್ಯಾಸಕರನ್ನು ಕರ್ತವ್ಯದ ಮೇಲೆ ಪುನರ್‌ಸ್ಥಾಪಿಸಿರುವುದಿಲ್ಲ ಈ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಗೆ ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಈ ಬಗ್ಗೆ ಸರ್ಕಾರದ ಪ್ರಾಧಿಕಾರದ ಮುಂದೆ ಆಡಳಿತ ಮಂಡಳಿಯು ಶಿಕ್ಷಣ ಕಾಯ್ದೆಯ ಕಲಂ 131ರಡಿ ಮೇಲ್ಮನವಿ ಸಂ.39/2007ರಲ್ಲಿ ಮೇಲ್ಮನವಿ ಸಲ್ಲಿಸಿತ್ತು. ಮೇಲ್ಮನವಿ ಇತ್ಯರ್ಥವಾಗುವರೆಗೆ ಸರ್ಕಾರದ ಆದೇಶ ಸಂ.ಕಂಇ 52 ಮುನೋಸೋ 2007 ದಿನಾಂಕ 08-02-2008ರಲ್ಲಿ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ರನ್ವಯ ತಹಶೀಲ್ದಾರ್, ಹೊನ್ನಾವರ ತಾಲ್ಲೂಕು ಇವರನ್ನು ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿಯನ್ನು ನೇಮಕ ಮಾಡಿರುವ ಕ್ರಮವನ್ನು ಸಂಸ್ಥೆಯು ಉಚ್ಚ ನ್ಯಾಯಾಲಯದ ಮುಂದೆ ರಿಟ್ ಅರ್ಜಿ ಸಂ. 3036/2008ರಲ್ಲಿ ಪ್ರಶ್ನಿಸಿತ್ತು. ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 15-10-2009ರಂದು ರಿಟ್ ಅರ್ಜಿಯನ್ನು ನಿರರ್ಥಕಗೊಂಡಿದೆಯೆಂದು ವಜಾಗೊಳಿಸಿರುತ್ತದೆ. ತದನಂತರ ಸಂಸ್ಥೆಯ ನೋಂದಣಿಯನ್ನು ದಿನಾಂಕ 22-12-2009 ರಂದು ನಿಯಮಾನುಸಾರ ನವೀಕರಿಸಲಾಗಿರುತ್ತದೆ. ಸರ್ಕಾರದ ಪ್ರಾಧಿಕಾರವು ಸಂಸ್ಥೆಯು ಸಲ್ಲಿಸಿದ್ದ ಮೇಲ್ಮನವಿ ಸಂ. 39/2007 ಅನ್ನು ದಿನಾಂಕ 27-04-2010ರಂದು ಹೊಸದಾಗಿ ಪ್ರಕರಣವನ್ನು ಇತ್ಯರ್ಥಪಡಿಸಲು ನಿರ್ದೇಶಕರು, ಪಪೂಶಿಇ ಇವರಿಗೆ ವಾಪಸು ಮಾಡಿದೆ.

ಈ ಸಂಸ್ಥೆಯ ಆಡಳಿತ ಮಂಡಳಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಇದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ಪರಿಶೀಲಿಸಿ ಇತ್ತೀಚಿನ ಅಭಿಪ್ರಾಯ ನೀಡುವಂತೆ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರನ್ನು ಕೋರಲಾಗಿತ್ತು. ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ಶ್ರೀ ಬಿ.ಕೃಷ್ಣ, ಆಂಗ್ಲ ಉಪನ್ಯಾಸಕರ ಸೇವೆಯು ಖಾಯಂ ಪೂರ್ವ ಸೇವಾವಧಿಯಲ್ಲಿ ತೃಪ್ತಿಕರವಾಗಿಲ್ಲವೆಂಬ ಕಾರಣದಿಂದ ಆಡಳಿತ ಮಂಡಳಿ ಅವರನ್ನು ಕರ್ನಾಟಕ ನಾಗರಿಕ ಸೇವಾ (ಪ್ರೊಬೇಶನರಿ) ನಿಯಮಗಳು, 1977ರ ನಿಯಮ 6ರನ್ವಯ ಸೇವೆಯಿಂದ ಬಿಡುಗಡೆ ಮಾಡಿದೆ. ಸಂಸ್ಥೆಯು ತನ್ನ ನೋಂದಣಿ ಮತ್ತು ಆಡಳಿತ ಮಂಡಳಿ ಸದಸ್ಯರ ಪಟ್ಟಿಯನ್ನು ಸಕ್ಷಮ ಪ್ರಾಧಿಕಾರದಿಂದ ನವೀಕರಿಸಿಕೊಂಡಿದೆಯೆಂದು ತಿಳಿಸಿ, ಶ್ರೀ ಬಿ.ಕೃಷ್ಣ ಇವರ ಬಿಡುಗಡೆಯ ವಿಚಾರದಲ್ಲಿ ನಿಯಮಾನುಸಾರ ಕ್ರಮ ಕೈಗೊಂಡ ಹಿನ್ನೆಲೆಯಲ್ಲಿ ಸಂಸ್ಥೆಗೆ ಆಡಳಿತಾಧಿಕಾರಿಯ ನೇಮಕದ ಅವಶ್ಯಕತೆ ಇರುವುದಿಲ್ಲವೆಂದು ಅಭಿಪ್ರಾಯ ತಿಳಿಸಿದ್ದಾರೆ.

ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಅಭಿಪ್ರಾಯವು ಶ್ರೀ ಬಿ.ಕೃಷ್ಣ, ಆಂಗ್ಲ ಉಪನ್ಯಾಸಕರು ಇವರ ಪ್ರಕರಣದಲ್ಲಿ ಈ ಹಿಂದಿನ ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದು, ಸರ್ಕಾರದ ಮುಂದೆ ಸಂಸ್ಥೆ ಸಲ್ಲಿಸಿದ್ದ ಅಪೀಲು ಸಂ.39/2007ರಲ್ಲಿ ದಾಖಲಿಸಿರುವ ಹೇಳಿಕೆಗೂ ಸಹ ವಿರುದ್ಧವಾಗಿರುವುದರಿಂದ, ಅವರ ಅಭಿಪ್ರಾಯವನ್ನು ಒಪ್ಪಿರುವುದಿಲ್ಲ. ಕರ್ನಾಟಕ ನಾಗರಿಕ ಸೇವಾ (ಪ್ರೊಬೇಶನರಿ) ನಿಯಮಗಳು, 1977ರ ನಿಯಮಗಳು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಅನ್ವಯಿಸುವುದಿಲ್ಲ. ಆದರೂ ಸಂಸ್ಥೆಯು ಈ ನಿಯಮಗಳನ್ವಯ ಉಪನ್ಯಾಸಕರನ್ನು ಪರಿವೀಕ್ಷಣಾ ಅವಧಿಯಲ್ಲಿ ಮುಂದುವರೆಸಿರುವುದಾಗಿ ಪರಿಗಣಿಸಿ ವಾರ್ಷಿಕ ವೇತನ ಬಡ್ತಿಗಳನ್ನು ನೀಡದೇ ಅವರ ಸೇವೆ ತೃಪ್ತಿಕರವಾಗಿಲ್ಲವೆಂಬ ಕಾರಣದಿಂದ ಸೇವೆಯಿಂದ ಬಿಡುಗಡೆ ಮಾಡಿರುವ ಕ್ರಮವು ನಿಯಮಬಾಹಿರವಾಗಿರುತ್ತದೆ. ಈ ಉಪನ್ಯಾಸಕರು ಸತತವಾಗಿ 22-03-2000ರಿಂದ ಅನುದಾನಿತ ಹುದ್ದೆಯಲ್ಲಿ ಕಾರ್ಯನಿರ್ವಹಿಸಿದ್ದು, ಅನುದಾನಿತ ಹುದ್ದೆಯಲ್ಲಿನ ಸಿಬ್ಬಂದಿಯನ್ನು ಕರ್ನಾಟಕ ಪದವಿ ಪೂರ್ವ ಶಿಕ್ಷಣ (ಶೈಕ್ಷಣಿಕ, ನೋಂದಣಿ, ಆಡಳಿತ ಮತ್ತು ಸಹಾಯಾನುದಾನ ಇತ್ಯಾದಿ) ನಿಯಮಗಳು, 2006ರ ನಿಯಮ 27 ಮತ್ತು 29ರಡಿ ವಿಚಾರಣೆ ನಡೆಸದೇ ಮತ್ತು ನಿಯಮ 28ರನ್ವಯ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪೂರ್ವಾನುಮತಿ ಪಡೆಯದೇ ದಂಡನೆ ವಿಧಿಸಲು ಅವಕಾಶವಿಲ್ಲ. ಆದಾಗ್ಯೂ, ಸಂಸ್ಥೆಯು ಈ ಉಪನ್ಯಾಸಕರನ್ನು ಸೇಡಿನ ಮನೋಭಾವನೆಯಿಂದ ವಿಚಾರಣೆ ನಡೆಸದೇ ಮತ್ತು ಇಲಾಖೆಯ ಪೂರ್ವಾನುಮತಿ ಪಡೆಯದೇ ನಿಯಮಬಾಹಿರವಾಗಿ ಸೇವೆಯಿಂದ ಬಿಡುಗಡೆಗೊಳಿಸಿರುತ್ತದೆ. ಹಾಗೂ ಹಲವಾರು ಬಾರಿ ತಿಳುವಳಿಕೆ ನೀಡಿದರೂ ಉಪನ್ಯಾಸಕರ ವಿರುದ್ಧದ ಕ್ರಮವನ್ನು ಸಮರ್ಥನೆ ಮಾಡಿಕೊಳ್ಳುತ್ತಿದೆ. ಈ ರೀತಿಯಾಗಿ ಶಿಕ್ಷಣ ಕಾಯ್ದೆಯಡಿ ಸರ್ಕಾರ ನೀಡಿದ ಆದೇಶ, ಪದವಿ ಪೂರ್ವ ಶಿಕ್ಷಣ ನಿಯಮಗಳು, 2006ರ ಉಪಬಂಧಗಳನ್ನು ಅನುಸರಿಸದೇ ಇಲಾಖೆಯ ನಿರ್ದೇಶನಗಳನ್ನು ಲೆಕ್ಕಿಸದೇ ಕ್ರಮಬದ್ಧವಾದ ಆಡಳಿತದ ಮೂಲಕ ಸಂಸ್ಥೆಯನ್ನು ನಡೆಸಲು ಆಡಳಿತ ಮಂಡಳಿ ವಿಫಲವಾಗಿದೆ. ಈ ಶಿಕ್ಷಣ ಸಂಸ್ಥೆಯಲ್ಲಿ ಕ್ರಮಬದ್ಧವಾದ ಆಡಳಿತವನ್ನು ಜಾರಿಗೊಳಿಸುವ ದೃಷ್ಟಿಯಿಂದ ಸಂಸ್ಥೆಯ ಆಡಳಿತವನ್ನು ಕರ್ನಾಟಕ ಶಿಕ್ಷಣ ಕಾಯ್ದೆ, 1983ರ ಕಲಂ 67ರಡಿ ಸರ್ಕಾರ ವಹಿಸಿಕೊಳ್ಳುವುದು ಸೂಕ್ತವೆಂದು ಮನಗಂಡು, ಈ ಬಗ್ಗೆ ಮೇಲೆ(2)ರಲ್ಲಿ ಓದಲಾದ ಕಾರಣ ಕೇಳುವ ಸೂಚನಾ ಪತ್ರವನ್ನು ಆಡಳಿತ ಮಂಡಳಿಯ ಅಧ್ಯಕ್ಷರಿಗೆ ಜಾರಿಗೊಳಿಸಿ, ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಆಡಳಿತ ಮಂಡಳಿಯ ಜವಾಬ್ದಾರಿಯನ್ನು ಸರ್ಕಾರ ವಹಿಸಿಕೊಳ್ಳುವ ಕ್ರಮದ ಬಗ್ಗೆ ಅವರ ಹೇಳಿಕೆ ಇದ್ದಲ್ಲಿ ಲಿಖಿತ ಮೂಲಕ ಸಲ್ಲಿಸಲು ತಿಳಿಸಲಾಗಿತ್ತು.

ಸರ್ಕಾರವು ಜಾರಿಗೊಳಿಸಿರುವ ಕಾರಣ ಕೇಳುವ ಸೂಚನಾ ಪತ್ರಕ್ಕೆ ಮೇಲೆ (3)ರಲ್ಲಿ ಓದಲಾದ ಲಿಖಿತ ಹೇಳಿಕೆಯನ್ನು ಸಲ್ಲಿಸಿ, ಈ ಕೆಳಗಿನ ಕಾರಣಗಳಿಂದ ನೋಟೀಸಿನ ಯಾವುದೇ ಕ್ರಮವನ್ನು ಕೈಬಿಡುವಂತೆ ಕೋರಿದ್ದಾರೆ.

1) ಸಂಸ್ಥೆಯ ಅವಿಧೇಯ ನೌಕರನನ್ನು ಪರಿವೀಕ್ಷಣಾ ಅವಧಿಯಲ್ಲಿ ಸೇವೆ ತೃಪ್ತಿಕರವಾಗಿಲ್ಲದ್ದರಿಂದ ಸೇವೆಯಿಂದ ಬಿಡುಗಡೆಗೊಳಿಸಿ ನಿಯಮಾನುಸಾರ ಇಲಾಖೆಯ ಪೂರ್ವಾನುಮತಿ ಪಡೆದು ಆದೇಶ ನೀಡಿದ್ದು, ಈ ಕಾರಣದಿಂದ ಆಡಳಿತ ಮಂಡಳಿಯನ್ನೇ ರದ್ದುಗೊಳಿಸಿ ಆಡಳಿತಾಧಿಕಾರಿ ನೇಮಕ ಮಾಡುವ ಸರ್ಕಾರದ ಕ್ರಮ ನ್ಯಾಯೋಚಿತವಾಗಿರುವುದಿಲ್ಲ.

2) ಶ್ರೀ ಬಿ. ಕೃಷ್ಣರವರು ಈ ಸಂಸ್ಥೆಯಿಂದ ನಡೆಯುತ್ತಿರುವ ಪದವಿ ಪೂರ್ವ ಕಾಲೇಜಿನಲ್ಲಿ ಆಂಗ್ಲ ಭಾಷಾ ಉಪನ್ಯಾಸಕ ಹುದ್ದೆಗೆ ನೇಮಕಾತಿ ಹೊಂದಿ ಸೇವೆಗೆ ಸೇರಬೇಕಾದ ಸಂದರ್ಭದಲ್ಲಿ ಕೇಳಿದ ದಾಖಲೆಗಳನ್ನು ನೀಡದೇ ಇದ್ದುದರಿಂದ ಹಾಗೂ ದಾಖಲಾತಿಗಳನ್ನು ಸದರಿಯವರ ಜನ್ಮ ದಿನಾಂಕ ತಪ್ಪಾಗಿ ನಮೂದಾಗಿದ್ದ ಕಾರಣ ಸದರಿ ದಾಖಲೆಗಳು ಇಲಾಖಾಧಿಕಾರಿಗಳ ಮುಂದಿದ್ದು, ಈ ವಿಷಯ ಇತ್ಯರ್ಥವಾದ ಕೂಡಲೇ ಕ್ರಮವಹಿಸಲಾಗಿದೆ. ಶ್ರೀ ಬಿ. ಕೃಷ್ಣರವರ ಸೇವೆ ತೃಪ್ತಿಕರವಿಲ್ಲದ ಕಾರಣ ಸೇವೆಯಿಂದ ಬಿಡುಗಡೆಗೊಳಿಸಲಾಗಿರುತ್ತದೆ. ಈ ಸಂಬಂಧ

ಸರ್ಕಾರದ ಮುಂದೆ ಇದ್ದ ಅಪೀಲು ಪ್ರಕರಣ ಸಂಖ್ಯೆ: 37/2002ರಲ್ಲಿ ದಿನಾಂಕ: 30–12–2002 ರಂದು ಆದೇಶ ಹೊರಡಿಸಿದ್ದು, ಅದರಲ್ಲಿ ನಿಯಮಾನುಸಾರ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿದಿರುವುದನ್ನು ನಿಯಮಾನುಸಾರ ಪರಿಗಣಿಸಿ ಕ್ರಮ ವಹಿಸಲು ಆದೇಶಿಸಿರುತ್ತಾರೆಯೇ ಹೊರತು ಕೂಡಲೇ ಬಿಡುಗಡೆ ಮಾಡುವಂತೆ ಆದೇಶಿಸಿರುವುದಿಲ್ಲ. ಈ ವಿಷಯವನ್ನು ಇಲಾಖಾ ಅಧಿಕಾರಿಗಳ ಗಮನಕ್ಕೆ ತರಲಾಗಿದೆ. ಈ ನೌಕರನ ಬಗ್ಗೆ ಸಂಸ್ಥೆ ಯಾವುದೇ ಸೇಡಿನ ಕ್ರಮ ವಹಿಸಿಲ್ಲ. ಬದಲಾಗಿ ಸದರಿ ನೌಕರರು ಅಶಿಸ್ತು, ಅವಿಧೇಯತೆಯಿಂದ ನಡೆದುಕೊಂಡು ಸಂಸ್ಥೆಯಲ್ಲಿ ಜವಾಬ್ದಾರಿಯುತ ಸ್ಥಾನದಲ್ಲಿರುವವರ ಮೇಲೆ ಸಲ್ಲದ ದೂರು ನೀಡಿ ಪೊಲೀಸ್ ಇಲಾಖೆಯಿಂದ ಪದೇ ಪದೇ ವಿಚಾರಣೆ ನಡೆಯುವಂತೆ ಮಾಡಿರುತ್ತಾರೆ. ಸಂಸ್ಥೆಯು ಇಲಾಖೆಯ ಯಾವುದೇ ನಿಯಮಗಳನ್ನು ಮೀರಿರುವುದಿಲ್ಲ. ಅಲ್ಲದೇ, ಸೆಪ್ಟೆಂಬರ್ 2010 ರಿಂದ ಹೊಸದಾಗಿ ಚುನಾಯಿತ ಪದಾಧಿಕಾರಿಗಳನ್ನು ಹೊಂದಿ ಕಾರ್ಯ ನಿರ್ವಹಿಸುತ್ತಿದೆ.

3) ಸರ್ಕಾರವು ದಿನಾಂಕ: 8–2–2008ರಲ್ಲಿ ಕಂದಾಯ ಇಲಾಖೆಯ ಮುಖಾಂತರ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27–ಎ ಪ್ರಕಾರ ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿ ಆದೇಶ ಹೊರಡಿಸಿದ್ದು, ಇದನ್ನು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 3036/2008ರಲ್ಲಿ ಸಂಸ್ಥೆಯು ಪ್ರಶ್ನಿಸಿದ್ದು, ಇದಕ್ಕೆ ದಿನಾಂಕ: 22–2–2008 ರಂದು ತಡೆಯಾಜ್ಞೆ ನೀಡಲಾಗಿದೆ. ಈ ಬಗ್ಗೆ ಸರ್ಕಾರದಿಂದ ಯಾವುದೇ ಆದೇಶ ಹೊರಡಿಸಿಲ್ಲದಿರುವುದರಿಂದ ಪ್ರಕರಣವನ್ನು ದಿನಾಂಕ: 15–10–2009ರಲ್ಲಿ ಮುಕ್ತಾಯಗೊಳಿಸಿ ಆದೇಶ ನೀಡಲಾಗಿದೆ.

4) ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು ತಮ್ಮ ಪತ್ರ ಸಂಖ್ಯೆ:ಪಪೂಶಿಇ/ಕ್ಯೂಕ್ಯೂ/033/2007–08 ದಿನಾಂಕ: 19–10–2010ರಲ್ಲಿ ಸಂಸ್ಥೆಯು ನಿಯಮಾನುಸಾರ ಕ್ರಮ ವಹಿಸಿರುವುದನ್ನು ವಿವರಿಸಿ ಶ್ರೀ ಬಿ. ಕೃಷ್ಣರವರ ಬಿಡುಗಡೆ ವಿಷಯದಲ್ಲಿ ನಿಯಮಾನುಸಾರ ಕ್ರಮ ಕೈಗೊಂಡಿರುವ ಕಾರಣ ಆಡಳಿತ ಅಧಿಕಾರಿಗಳ ನೇಮಕದ ಅವಶ್ಯಕತೆ ಕಂಡುಬಂದಿರುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆಂದು ತಿಳಿಸಲಾಗಿದೆ.

5) ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ದಿನಾಂಕ: 2–7–2007ರ ಆದೇಶವನ್ನು ಪ್ರಶ್ನಿಸಿ ಸಲ್ಲಿಸಿದ್ದ ಅಪೀಲು ಸಂಖ್ಯೆ: 39/2007ರಲ್ಲಿ ಮೇಲ್ಮನವಿ ಪ್ರಾಧಿಕಾರವು ದಿನಾಂಕ: 27–4–2007ರ ಆದೇಶದಲ್ಲಿ ಸಂಸ್ಥೆಯ ಅಪೀಲನ್ನು ಪುರಸ್ಕರಿಸಿ ಆದೇಶಿಸಲಾಗಿದೆ.

6) ಶ್ರೀ ಬಿ. ಕೃಷ್ಣ ಇವರು ದಿನಾಂಕ: 25–9–1997ರಂದು ಸೇವೆಗೆ ಹಾಜರಾಗಿ ದೀರ್ಘ ಅನಧಿಕೃತ ಗೈರು ಹಾಜರಿಯಾಗಿರುತ್ತಾರೆ. ದಿನಾಂಕ: 27–7–2000 ರಂದು ಇವರ ನೇಮಕಾತಿ ಅನುಮೋದನೆ ಆದೇಶದಲ್ಲಿ ಜನ್ಮ ದಿನಾಂಕದ ತಿದ್ದುಪಡಿ ಆದೇಶ ಆಗಿರುತ್ತದೆ. ಹಾಜರಿ ಪುಸ್ತಕಕ್ಕೆ ಸಹಿ ಮಾಡಲು ನಿರಾಕರಿಸಿ ಹೋಗಿರುತ್ತಾರೆ. ದಿನಾಂಕ 7–8–2000ರಂದು ಶಾಲಾ ಆವರಣದಲ್ಲಿ ಧರಣಿಯಂತಹ ಅನಧಿಕೃತ ಕಾರ್ಯಗಳನ್ನು ಮಾಡಿ ನಿಯಮ ಬಾಹಿರವಾಗಿ ವರ್ತಿಸಿರುತ್ತಾರೆ. ಉಪ ನಿರ್ದೇಶಕರು, ಕಾರವಾರ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಸಹ ವಿಚಾರಣೆ ನಡೆಸಿರುತ್ತಾರೆ. ದಿನಾಂಕ 29–8–2000ರಂದು ನೌಕರರ ಸೇವಾ ನಿಯಮಬಾಹಿರ ವರ್ತನೆಗಳ ಬಗ್ಗೆ ವಿವರಣೆ ನೀಡಿ ವರದಿ ಕೊಡಲಾಗಿದೆ. ದಿನಾಂಕ 31–3–2004ರಂದು ನಿರ್ದೇಶಕರಿಗೆ ತೃಪ್ತಿಕರ ಸೇವೆ ಇಲ್ಲದ ಕಾರಣ ವಿವರಿಸಿ ವರದಿ ನೀಡಿ ಸೇವೆಯಿಂದ ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. ದಿನಾಂಕ 2–4–2002ರ ಪತ್ರದಂತೆ ಆಡಳಿತ ಮಂಡಳಿ ಸ್ವತಃ ಕ್ರಮ ಕೈಗೊಳ್ಳಲು ಅನುಮತಿ ನೀಡಲಾಗಿದೆ. ತದನಂತರದಲ್ಲಿ ನೌಕರರಿಗೂ ನೋಟೀಸು ನೀಡಿ ದಿನಾಂಕ 22–4–2007ರಂದು ಸೇವೆಯಿಂದ ಬಿಡುಗಡೆ ಮಾಡಲಾಗಿದೆ. ಸರ್ಕಾರದ ಆದೇಶ ದಿನಾಂಕ 22–3–2000ರ ಪ್ರಕಾರ ಇದ್ದ ಷರತ್ತುಗಳನ್ನು ನೌಕರರು ಉದ್ದೇಶಪೂರ್ವಕ ಪೂರೈಸಿರುವುದಿಲ್ಲ. ಸಂಸ್ಥೆಯ ಆಡಳಿತ ಮಂಡಳಿ ಪದಾಧಿಕಾರಿಗಳು, ಪ್ರಾಚಾರ್ಯರಿಗೆ ಅವಿಧೇಯನಾಗಿ ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ವಿರುದ್ಧ ನಡವಳಿ ಹೊಂದಿರುವ, ಸತತವಾಗಿ ಸೇವೆಗೆ ಗೈರು ಹಾಜರಿಯಾಗುವ ಇವರನ್ನು ಸಂಸ್ಥೆಯ ಹಾಗೂ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸೇವೆಯಿಂದ ವಜಾ ಮಾಡಲಾಗಿದೆ ಆದ್ದರಿಂದ ಸಂಸ್ಥೆಯ ಆಡಳಿತ ಮಂಡಳಿಯನ್ನು ರದ್ದುಪಡಿಸುವಂತಹ ಕ್ರಮವನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಸಂಸ್ಥೆಯವರು ಸಲ್ಲಿಸಿರುವ ಉತ್ತರವನ್ನು ಪರಿಶೀಲಿಸಲಾಗಿದೆ. ಶ್ರೀ ಬಿ. ಕೃಷ್ಣ ಇವರನ್ನು ಪ್ರೊಬೇಶನರಿ ನಿಯಮಗಳು ಅನ್ವಯಿಸದಿದ್ದರೂ, ಖಾಯಂಪೂರ್ವ ಸೇವೆಯಲ್ಲಿದ್ದರೆಂದು ಪರಿಗಣಿಸಿ, ಅವರ ಸೇವೆ ತೃಪ್ತಿಕರವಾಗಿಲ್ಲವೆಂದು ಬಿಡುಗಡೆಗೊಳಿಸಿರುವ ಕ್ರಮವು ನಿಯಮಬಾಹಿರವಾಗಿದ್ದು, ಅನುದಾನಿತ ಸಿಬ್ಬಂದಿಯನ್ನು ಸೇವೆಯಿಂದ ತೆಗೆದುಹಾಕುವ ಮುಂಚೆ ನಿಯಮಾನುಸಾರ ಅನುಸರಿಸಬೇಕಾದ ವಿಚಾರಣೆಯ ಕ್ರಮಗಳನ್ನು ಅನುಸರಿಸದೇ ಇರುವುದರಿಂದ ಮತ್ತು ಈ ಬಗ್ಗೆ ಇಲಾಖೆಯ ಹಾಗೂ ಸರ್ಕಾರದ ಆದೇಶಗಳನ್ನು ಉಲ್ಲಂಘಿಸಿರುವ ಸಂಸ್ಥೆಯ ಕ್ರಮವು ಒಪ್ಪಲರ್ಹವಲ್ಲ. ಸಂಸ್ಥೆಯು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡುಬಾರದಿರುವ ಹಿನ್ನೆಲೆಯಲ್ಲಿ, ಅವರ ಹೇಳಿಕೆಯನ್ನು ತಿರಸ್ಕರಿಸಿ, ಸರ್ಕಾರವು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ. ಇಡಿ 223 ಎಸ್‌ಒಹೆಚ್ 2007, ಬೆಂಗಳೂರು, ದಿನಾಂಕ: 02–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು, ಕರ್ನಾಟಕ ಶಿಕ್ಷಣ ಕಾಯ್ದೆ, 1983ರ ಕಲಂ 67ರಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಶ್ರೀ ಸುಬ್ರಮಣ್ಯ ಎಜುಕೇಶನ್ ಸೊಸೈಟಿ (ರಿ). ಕವಲಕ್ಕಿ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಈ ಆಡಳಿತ ಮಂಡಳಿಯ ವತಿಯಿಂದ ನಡೆಯುತ್ತಿರುವ ಶ್ರೀ ಸುಬ್ರಮಣ್ಯ ಪದವಿ ಪೂರ್ವ ಕಾಲೇಜು, ಕವಲಕ್ಕಿ ಈ ಪದವಿ ಪೂರ್ವ ಕಾಲೇಜಿನಲ್ಲಿ ಕ್ರಮಬದ್ಧವಾದ ಆಡಳಿತವನ್ನು ಜಾರಿಗೊಳಿಸುವ ದೃಷ್ಟಿಯಿಂದ, ಈ ಕಾಲೇಜಿನ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಸದರಿ ಶಿಕ್ಷಣ ಸಂಸ್ಥೆಯ ಆಡಳಿತದ ಜವಾಬ್ದಾರಿಯನ್ನು ಮುಂದಿನ ವ್ಯವಸ್ಥೆಯಾಗುವವರೆಗೆ ನಿರ್ವಹಿಸಲು ಉಪ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಉತ್ತರ ಕನ್ನಡ ಜಿಲ್ಲೆ ಇವರನ್ನು ವಿಶೇಷಾಧಿಕಾರಿಯಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಹೆಚ್. ಕುರಿಯವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪದವಿ ಪೂರ್ವ ಶಿಕ್ಷಣ)

ಪಿ.ಆರ್. 407

## ಶಿಕ್ಷಣ ಸಚಿವಾಲಯ

**ವಿಷಯ :** ಶಾಲಾ–ಕಾಲೇಜುಗಳಿಗೆ ದಾನಿಗಳ ಹೆಸರು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 51 ಯೋಸಕ 89 ದಿನಾಂಕ: 11.09.1989.

2) ಸರ್ಕಾರದ ಪತ್ರ ಸಂಖ್ಯೆ: ಇಡಿ 98 ಯೋಸಕ 2010 ದಿನಾಂಕ: 12.07.2010.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಉಲ್ಲೇಖ 1ರ ಸರ್ಕಾರದ ಆದೇಶದಲ್ಲಿ ಈ ಇಲಾಖೆಯಿಂದ ಪ್ರಸ್ತುತ ವಿಷಯದಲ್ಲಿ ಹಿಂದೆ ಹೊರಡಿಸಿದ್ದ ಎಲ್ಲಾ ಸರ್ಕಾರಿ ಆದೇಶಗಳನ್ನು ಪತ್ರಗಳನ್ನು ರದ್ದುಪಡಿಸಿ, ಎಲ್ಲಾ ಅಂಶಗಳನ್ನು ಪುನರ್ ಪರಿಶೀಲಿಸಿ, ಕರ್ನಾಟಕ ಸರ್ಕಾರದ ಎಲ್ಲಾ ಶಾಲಾ–ಕಾಲೇಜುಗಳಿಗೆ ಅನ್ವಯವಾಗುವಂತೆ ಸಾರ್ವಜನಿಕರಿಂದ ಶಾಲಾ ಕಾಲೇಜುಗಳಿಗೆ ಸೂಕ್ತ ನಿವೇಶನ, ಕಟ್ಟಡ ಮತ್ತು ಹಣವನ್ನು ದಾನರೂಪದಲ್ಲಿ ಸ್ವೀಕರಿಸಲಾಗುವುದು. ದಾನ ನೀಡುವ ವ್ಯಕ್ತಿ ಇಷ್ಟಪಟ್ಟ ಗಣ್ಯ ವ್ಯಕ್ತಿಯ ಹೆಸರನ್ನು ಸರ್ಕಾರಿ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಕಾಲೇಜಿಗೆ ನಾಮಕರಣ ಮಾಡಲು ಸೂಕ್ತ ನಿವೇಶನ ಸೂಕ್ತ ಕಟ್ಟಡ ಮತ್ತು ಹಣವನ್ನು ಗೌರವಗಳೊಂದಿಗೆ ದಾನ ರೂಪದಲ್ಲಿ ಸ್ವೀಕರಿಸಲಾಗುವುದು. ವಿವಿಧ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ ನಿಗದಿಪಡಿಸಿರುವ ದಾನ ರೂಪದ ನಿವೇಶನ ಕಟ್ಟಡ ಅಥವಾ ಹಣವನ್ನು ಪಡೆಯಲು ಈ ಕೆಳಕಂಡ ನಿಬಂಧನೆಗಳೊಂದಿಗೆ ದಾನ ಸ್ವೀಕರಿಸಲಾಗುವುದು ಎಂದು ಆದೇಶ ನೀಡಲಾಗಿತ್ತು.

| ಸರ್ಕಾರಿ ವಿದ್ಯಾ ಸಂಸ್ಥೆಯ ವರ್ಗ | ನಿಗದಿಪಡಿಸಿರುವ ದಾನರೂಪದ ಆಸ್ತಿ ಅಥವಾ ನಗದು |
|---|---|
| ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ, ಅಧೀನಕ್ಕೆ ಒಳಪಡುವ ಎಲ್ಲಾ ಮಟ್ಟದ ಶಾಲಾ ಕಟ್ಟಡಗಳು | ಕಾಲೇಜು; ಶಾಲಾ ಕಟ್ಟಡದ ಒಂದು ಅಥವಾ ಹೆಚ್ಚಿನ ಕೊಠಡಿಗಳನ್ನು ಒಳಾಂಗಣ–ಹಜಾರವನ್ನು ನಿರ್ಮಿಸಲು ತಗಲುವ ವೆಚ್ಚವನ್ನು ಭರಿಸಿದಲ್ಲಿ ದಾನಿಗಳು ಇಚ್ಚಿಸುವ ಹೆಸರನ್ನು ಆ–ಭಾಗಕ್ಕೆ ನಾಮಕರಣ ಮಾಡಲಾಗುವುದು. |

**ಇತರೆ ಷರತ್ತುಗಳು**

- ದಾನಿಗಳು ಇಷ್ಟ ಪಟ್ಟ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕಟ್ಟಡದ ಒಟ್ಟು ಅಂದಾಜಿನ 1:3ನೇ ಭಾಗದಷ್ಟು ಅಥವಾ ಹೆಚ್ಚಿನ ಹಣ ನೀಡಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಟ್ಟಡ ಎಂದರೆ ಕಟ್ಟಡ ನಿರ್ಮಾಣಕ್ಕಾಗಿ ಶಾಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲು ಅನುಕೂಲವಾಗಿರುವ ಒಂದು ಪೂರ್ಣ ಹಂತವಾಗಿರುತ್ತದೆ. ಕೇವಲ ಒಂದು ಅಥವಾ ಎರಡು ಕೊಠಡಿಗಳಿಗೆ ಅನ್ವಯಿಸುವುದಿಲ್ಲ.
- ಇದಕ್ಕಿಂತ ಕಡಿಮೆ ಮೊತ್ತದ ದಾನ ನೀಡಿದ ಪಕ್ಷದಲ್ಲಿ ಆ ಮೊತ್ತದಿಂದ ಕಟ್ಟಲ್ಪಟ್ಟ ಕೊಠಡಿ, ಒಳಾಂಗಣಾ ಅಥವಾ ಆ ವಿಭಾಗಕ್ಕೆ ಮಾತ್ರ ಸದರಿ ದಾನಿಗಳು ಇಚ್ಚೆಪಟ್ಟ ಹೆಸರನ್ನು ನಾಮಕರಣ ಮಾಡುವ ಅವಕಾಶವಿರುವುದು.
- ದಾನಿಗಳು ನೀಡುವ ದಾನ ಜಮೀನಿನ ರೂಪದಲ್ಲಿದ್ದು ಕ್ರೀಡಾಂಗಣಕ್ಕೆ ಉಪಯುಕ್ತವಾಗಿದ್ದರೆ, ಈ ಕ್ರೀಡಾಂಗಣಕ್ಕೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲಾಗುವುದು.
- ಒಬ್ಬರು ಮತ್ತು ಹೆಚ್ಚಿನ ದಾನಿಗಳು ಒಂದೇ ವಿದ್ಯಾಸಂಸ್ಥೆಗೆ ದಾನ ನೀಡಿದಾಗ ಆ ವಿದ್ಯಾ ಸಂಸ್ಥೆಯ ಕಟ್ಟಡ ಅಥವಾ ಭೂಮಿಯನ್ನು ವಿಂಗಡಿಸಿ, ಪ್ರತಿಯೊಬ್ಬ ದಾನಿಗಳು ಸೂಚಿಸಿರುವ ಹೆಸರನ್ನಿಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಹಣದ ರೂಪದಲ್ಲಿದ್ದರೆ ಹಣ ಸ್ವೀಕರಿಸಿ ಸರ್ಕಾರಿ ಖಾತೆಗೆ ಜಮಾ ಮಾಡಿಕೊಂಡ ನಂತರ ಮೇಲ್ಕಂಡ ನಿಬಂಧನೆಗೆ ಒಳಪಟ್ಟು ದಾನಿಗಳು ಇಚ್ಚಿಸಿದ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಆಸ್ತಿ ರೂಪದಲ್ಲಿದ್ದರೆ, ದಾನ ಸ್ವೀಕರಿಸುವ ಹಕ್ಕು ಪತ್ರದ ದಾಖಲೆಗಳು ನ್ಯಾಯ ಬದ್ಧವಾಗಿರುವುದನ್ನು ಪರಿಶೀಲಿಸಿ ಸದರಿ ಆಸ್ತಿಯನ್ನು ಶಾಲೆಗೆ ವರ್ಗಾಯಿಸಿಕೊಂಡ ಮೇಲೆ ತಿಳಿಸಿರುವ ನಿಬಂಧನೆಗಳನ್ನು ಪೂರೈಸಿದನಂತರ ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸಿದ ಹೆಸರನ್ನು ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ಕಾಲೇಜು ಶಿಕ್ಷಣ ನಿರ್ದೇಶಕರು, ತಾಂತ್ರಿಕ ಶಿಕ್ಷಣ ನಿರ್ದೇಶಕರ ಮತ್ತು ಕರ್ನಾಟಕದ ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರುಗಳ ಆಡಳಿತ ಪರಿಮಿತಿಯಲ್ಲಿರುವ ಸರ್ಕಾರಿ ವಿದ್ಯಾ ಸಂಸ್ಥೆಗಳಿಗೆ ದಾನಿಗಳು ಇಷ್ಟಪಟ್ಟ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಅಧಿಕಾರ ವಹಿಸಿಕೊಟ್ಟಿದೆ.
- ಸ್ವೀಕರಿಸುವ ದಾನ, ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲು ಮಾತ್ರ ಅನ್ವಯವಾಗುತ್ತದೆ. ಸ್ವೀಕರಿಸಿದ ದಾನವನ್ನು ಯಾವುದೇ ಕಾರಣಗಳಿಂದಾಗಿ ಹಿಂತಿರುಗಿಸಲಾಗುವುದಿಲ್ಲ.
- ದಾನಿಗಳಿಂದ ಮೇಲಿನ ಕಾರ್ಯಕ್ಕೆ ಈಗಾಗಲೇ ದಾನ ಸ್ವೀಕರಿಸಿ, ಕೆಲಸ ಕಾರ್ಯಗಳು ಮುಂದುವರಿಯುತ್ತಿದ್ದಲ್ಲಿ ಈ ಹಿಂದೆ ಹೊರಡಿಸಿದ ಆದೇಶದ ಷರತ್ತುಗಳು ಅನ್ವಯವಾಗುತ್ತದೆ.

ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ತಾತ್ಕಾಲಿಕವಾಗಿ ಶಾಲೆಗಳಿಗೆ ದಾನಿಗಳ ಹೆಸರನ್ನು ನಾಮಕರಣ ಮಾಡುವುದನ್ನು ಸ್ಥಗಿತಗೊಳಿಸಲಾಗಿದೆ. ಈಗ ಹಲವಾರು ದಾನಿಗಳಿಂದ ಶಾಲೆಗಳಿಗೆ ನಾಮಕರಣ ಮಾಡುವ ಪ್ರಸ್ತಾವನೆಗಳು ಬರುತ್ತಿದ್ದು ಸದರಿ ವಿಷಯದಲ್ಲಿ ಸರ್ಕಾರವು ವಿವರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ: 98 ಯೋಸಕ 2010, ಬೆಂಗಳೂರು, ದಿನಾಂಕ: 01ನೇ ಫೆಬ್ರವರಿ 2011**

ಈ ಇಲಾಖೆಯಿಂದ ಪ್ರಸ್ತುತ ವಿಷಯದಲ್ಲಿ ಹಿಂದೆ ಹೊರಡಿಸಿದ್ದ ಎಲ್ಲಾ ಸರ್ಕಾರಿ ಆದೇಶಗಳನ್ನು ಪತ್ರಗಳನ್ನು ರದ್ದುಪಡಿಸಿ, ಎಲ್ಲಾ ಅಂಶಗಳನ್ನು ಪುನರ್ ಪರಿಶೀಲಿಸಿ, ಕರ್ನಾಟಕ ಸರ್ಕಾರದ ಎಲ್ಲಾ ಶಾಲೆಗಳಿಗೆ ಅನ್ವಯವಾಗುವಂತೆ ಸಾರ್ವಜನಿಕರಿಂದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಸೂಕ್ತ ನಿವೇಶನ, ಕಟ್ಟಡ ಮತ್ತು ಹಣವನ್ನು ದಾನ ರೂಪದಲ್ಲಿ ಸ್ವೀಕರಿಸಲು ಹಾಗೂ ದಾನಿಗಳ ಹೆಸರನ್ನು ಇಡುವ ಬಗ್ಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೂ, ಪದವಿ ಪೂರ್ವ ಕಾಲೇಜಿಗೆ ಸಂಬಂಧಿಸಿದಂತೆ ಸಾರ್ವಜನಿಕರಿಂದ ಸೂಕ್ತ ನಿವೇಶನ, ಕಟ್ಟಡ ಮತ್ತು ಹಣವನ್ನು ದಾನರೂಪದಲ್ಲಿ

ಸ್ವೀಕರಿಸಲು ಹಾಗೂ ದಾನಿಗಳ ಹೆಸರನ್ನು ಇಡುವ ಬಗ್ಗೆ ನಿರ್ದೇಶಕರು/ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಬೆಂಗಳೂರು ಇವರಿಗೂ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮತಿ ನೀಡಲಾಗಿದೆ.

**ಷರತ್ತುಗಳು**

- ದಾನಿಗಳು ಇಷ್ಟ ಪಟ್ಟ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕಟ್ಟಡದ ಒಟ್ಟು ಅಂದಾಜಿನ 1:3ನೇ ಭಾಗದಷ್ಟು ಅಥವಾ ಹೆಚ್ಚಿನ ಹಣ ನೀಡಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಟ್ಟಡ ಎಂದರೆ ಕಟ್ಟಡ ನಿರ್ಮಾಣಕ್ಕಾಗಿ ಶಾಲಾ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲು ಅನುಕೂಲವಾಗಿರುವ ಒಂದು ಪೂರ್ಣ ಹಂತವಾಗಿರುತ್ತದೆ. ಕೇವಲ ಒಂದು ಅಥವಾ ಎರಡು ಕೊಠಡಿಗಳಿಗೆ ಅನ್ವಯಿಸುವುದಿಲ್ಲ.
- ಇದಕ್ಕಿಂತ ಕಡಿಮೆ ಮೊತ್ತದ ದಾನ ನೀಡಿದ ಪಕ್ಷದಲ್ಲಿ ಆ ಮೊತ್ತದಿಂದ ಕಟ್ಟಲ್ಪಟ್ಟ ಕೊಠಡಿ, ಒಳಾಂಗಣಾ ಅಥವಾ ಆ ವಿಭಾಗಕ್ಕೆ ಮಾತ್ರ ಸದರಿ ದಾನಿಗಳು ಇಚ್ಛೆಪಟ್ಟ ಹೆಸರನ್ನು ನಾಮಕರಣ ಮಾಡುವ ಅವಕಾಶವಿರುವುದು.
- ದಾನಿಗಳು ನೀಡುವ ದಾನ ಜಮೀನಿನ ರೂಪದಲ್ಲಿದ್ದು ಕ್ರೀಡಾಂಗಣಕ್ಕೆ ಉಪಯುಕ್ತವಾಗಿದ್ದರೆ, ಈ ಕ್ರೀಡಾಂಗಣಕ್ಕೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲಾಗುವುದು.
- ಒಬ್ಬರು ಮತ್ತು ಹೆಚ್ಚಿನ ದಾನಿಗಳು ಒಂದೇ ವಿದ್ಯಾಸಂಸ್ಥೆಗೆ ದಾನ ನೀಡಿದಾಗ ಆ ವಿದ್ಯಾ ಸಂಸ್ಥೆಯ ಕಟ್ಟಡ ಅಥವಾ ಭೂಮಿಯನ್ನು ವಿಂಗಡಿಸಿ, ಪ್ರತಿಯೊಬ್ಬ ದಾನಿಗಳು ಸೂಚಿಸುವ ಹೆಸರನ್ನಿಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಹಣದ ರೂಪದಲ್ಲಿದ್ದರೆ ಹಣ ಸ್ವೀಕರಿಸಿ ಸರ್ಕಾರಿ ಖಾತೆಗೆ ಜಮಾ ಮಾಡಿಕೊಂಡ ನಂತರ ಮೇಲ್ಕಂಡ ನಿಬಂಧನೆಗೆ ಒಳಪಟ್ಟು ದಾನಿಗಳು ಇಚ್ಛಿಸಿದ ಹೆಸರನ್ನು ವಿದ್ಯಾ ಸಂಸ್ಥೆಗೆ ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ದಾನಿಗಳು ನೀಡುವ ದಾನ ಆಸ್ತಿ ರೂಪದಲ್ಲಿದ್ದರೆ, ದಾನ ಸ್ವೀಕರಿಸುವ ಹಕ್ಕು ಪತ್ರದ ದಾಖಲೆಗಳು ನ್ಯಾಯ ಬದ್ಧವಾಗಿರುವುದನ್ನು ಪರಿಶೀಲಿಸಿ ಸದರಿ ಆಸ್ತಿಯನ್ನು ಕಾನೂನು ತೊಡಕುಗಳು ಬಾರದಂತೆ ಶಾಲೆಗೆ ವರ್ಗಾಯಿಸಿಕೊಂಡ ಮೇಲೆ ತಿಳಿಸಿರುವ ನಿಬಂಧನೆಗಳನ್ನು ಪೂರೈಸಿದನಂತರ ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸಿದ ಹೆಸರನ್ನು ನಾಮಕರಣ ಮಾಡಲು ಕ್ರಮ ಜರುಗಿಸಬೇಕು.
- ಸ್ವೀಕರಿಸುವ ದಾನ, ವಿದ್ಯಾ ಸಂಸ್ಥೆಗೆ ದಾನಿಗಳು ಸೂಚಿಸುವ ಹೆಸರನ್ನು ನಾಮಕರಣ ಮಾಡಲು ಮಾತ್ರ ಅನ್ವಯವಾಗುತ್ತದೆ. ಸ್ವೀಕರಿಸಿದ ದಾನವನ್ನು ಯಾವುದೇ ಕಾರಣಗಳಿಂದಾಗಿ ಹಿಂತಿರುಗಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 408

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುವೈದ್ಯಕೀಯ ಪರೀಕ್ಷಕರ/ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರಗಳಿಗೆ ದೂರವಾಣಿ ಹಾಗೂ ಅಂತರ್ಜಾಲ ಸಂಪರ್ಕ ಒದಗಿಸಲು ಅನುಮತಿ ನೀಡುವಿಕೆ.

**ಓದಲಾಗಿದೆ :** (1) ಆಪಸಂ/ಸನಿ/ಹ್ಯಾಚರಿ/ವಿವ–15/2010–11, ದಿನಾಂಕ: 28–09–2010.

(2) ಆಪಸಂ/ಸನಿ/ಹ್ಯಾಚರಿ/ವಿವ–11/2010–11, ದಿನಾಂಕ: 21–10–2010 ಹಾಗೂ 13–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ, (1) ಮತ್ತು (2)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಇಲಾಖೆಯ ಪಶುವೈದ್ಯಕೀಯ ಪರೀಕ್ಷಕರು ಮತ್ತು ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರಗಳ ಕೆಲಸ ಕಾರ್ಯಗಳನ್ನು ಸುವ್ಯವಸ್ಥಿತವಾಗಿ ನಡೆಸಲು ಹಾಗೂ ಹೊಸದಾಗಿ ನೇಮಕಗೊಂಡ ಪಶುವೈದ್ಯಕೀಯ ಪರೀಕ್ಷಕರುಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅನುಕೂಲವಾಗುವಂತೆ ತುಮಕೂರು, ಹಾಸನ, ಗುಲ್ಬರ್ಗಾದಲ್ಲಿನ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರಗಳಿಗೆ ಮತ್ತು ಬಳ್ಳಾರಿ, ಮಳವಳ್ಳಿ, ದಾವಣಗೆರೆ, ಬೆಳಗಾವಿಯಲ್ಲಿನ ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರಗಳಿಗೆ ದೂರವಾಣಿ ಹಾಗೂ ಅಂತರ್ಜಾಲ ಸಂಪರ್ಕ ಒದಗಿಸಲು ಅನುಮತಿ ನೀಡುವಂತೆ ಹಾಗೂ ಧಾರವಾಡ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರಕ್ಕೆ ದಿನಾಂಕ 22–06–2010ರಂದು ಅಂತರ್ಜಾಲ ಸಂಪರ್ಕದೊಂದಿಗೆ ದೂರವಾಣಿ ಸೌಲಭ್ಯ ಒದಗಿಸಿರುವುದಕ್ಕೆ ಘಟನೋತ್ತರ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಸದರಿ 7 ತರಬೇತಿ ಕೇಂದ್ರಗಳಿಗೆ ಅಂತರ್ಜಾಲದೊಂದಿಗೆ ದೂರವಾಣಿ ಸಂಪರ್ಕ ಪಡೆಯಲು ವಾರ್ಷಿಕ ಅಂದಾಜು ರೂ. 70,000/– ವೆಚ್ಚವಾಗಲಿದ್ದು, ಇದನ್ನು ಯೋಜನೇತರ ಲೆಕ್ಕಶೀರ್ಷಿಕೆ: 2403–00–109–0–01, ಉಪಶೀರ್ಷಿಕೆ: 200 (ನಿರ್ವಹಣೆ) ಅಡಿ ಭರಿಸಲಾಗುವುದೆಂದು ಹಾಗೂ ಧಾರವಾಡ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರವು ಈಗಾಗಲೇ ದೂರವಾಣಿ ಸೌಲಭ್ಯದೊಂದಿಗೆ ಅಂತರ್ಜಾಲ ಸಂಪರ್ಕವನ್ನು ಹೊಂದಿದ್ದು, ಇದಕ್ಕೆ ತಗಲುವ ವೆಚ್ಚವನ್ನೂ ಸಹ ಲೆಕ್ಕಶೀರ್ಷಿಕೆ: 2403–00–109–0–01, ಉಪಶೀರ್ಷಿಕೆ: 200 (ನಿರ್ವಹಣೆ) ಅಡಿ ಭರಿಸಲಾಗುವುದೆಂದು ಆಯುಕ್ತರು ತಿಳಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ 300 ಅಭ್ಯರ್ಥಿಗಳು ಹೊಸದಾಗಿ ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗೆ ನೇಮಕಾತಿ ಹೊಂದಿದ್ದು, ಅವರುಗಳಿಗೆ ತರಬೇತಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಹಾಗೂ ತರಬೇತಿ ಕೇಂದ್ರದ ದೈನಂದಿನ ಕಛೇರಿ ಕಾರ್ಯಗಳನ್ನು ತ್ವರಿತವಾಗಿ ನಡೆಸುವ ಸಲುವಾಗಿ ಅಂತರ್ಜಾಲ ಸೌಲಭ್ಯ ಹಾಗೂ ದೂರವಾಣಿ ಸಂಪರ್ಕ ಅವಶ್ಯಕವಾಗಿರುತ್ತದೆ. ಇಲಾಖೆಗೆ ನಿಗದಿಪಡಿಸಿದ ಅನುದಾನದಲ್ಲಿಯೇ ತರಬೇತಿ ಕೇಂದ್ರಗಳಿಗೆ ಅಂತರ್ಜಾಲ ಸಂಪರ್ಕದೊಂದಿಗೆ ದೂರವಾಣಿ ಸೌಲಭ್ಯ ಒದಗಿಸಲು ತಗಲುವ ವೆಚ್ಚವನ್ನು ಭರಿಸುವುದಾಗಿ ತಿಳಿಸಿರುತ್ತಾರೆ. ಸದರಿ ಸೌಲಭ್ಯವನ್ನು ಒದಗಿಸುವುದರಿಂದ ಪ್ರಶಿಕ್ಷಣಾರ್ಥಿಗಳಿಗೆ (Trainees) ಹಾಗೂ ತರಬೇತಿ ಕೇಂದ್ರಗಳಿಗೆ ಸಾಕಷ್ಟು ಅನುಕೂಲವಾಗುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ತುಮಕೂರು, ಹಾಸನ,

ಗುಲ್ಬರ್ಗಾ ಜಿಲ್ಲೆಗಳಲ್ಲಿನ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರಗಳಿಗೆ ಮತ್ತು ಬಳ್ಳಾರಿ, ದಾವಣಗೆರೆ, ಬೆಳಗಾವಿ, ಮಳವಳ್ಳಿಯಲ್ಲಿನ ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರಗಳಿಗೆ ದೂರವಾಣಿ ಮತ್ತು ಅಂತರ್ಜಾಲ ಸೌಲಭ್ಯವನ್ನು ಹೊಂದುವ ಸಂಬಂಧ ಅನುಮತಿ ನೀಡಲು ಹಾಗೂ ಧಾರವಾಡ ಜಿಲ್ಲೆಯ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರವು ಈಗಾಗಲೇ ಅಂತರ್ಜಾಲ ಸಂಪರ್ಕದೊಂದಿಗೆ ದೂರವಾಣಿ ಸೌಲಭ್ಯವನ್ನು ಹೊಂದಿರುವುದಕ್ಕೆ ಘಟನೋತ್ತರ ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 194 ಪಅವಿ 2010, ಬೆಂಗಳೂರು, ದಿನಾಂಕ: 31ನೇ ಜನವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗೆ ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ತರಬೇತಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಹಾಗೂ ತರಬೇತಿ ಕೇಂದ್ರಗಳ ದೈನಂದಿನ ಕೆಲಸಗಳನ್ನು ಸುವ್ಯವಸ್ಥಿತವಾಗಿ ನಡೆಸಲು ಅನುಕೂಲವಾಗುವಂತೆ ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ ಧಾರವಾಡ ಸಂಸ್ಥೆಯು ದಿನಾಂಕ: 22-06-2010ರಂದು ಅಂತರ್ಜಾಲ ಸಂಪರ್ಕದೊಂದಿಗೆ ದೂರವಾಣಿ ಸೌಲಭ್ಯವನ್ನು ಹೊಂದಿರುವುದಕ್ಕೆ ಘಟನೋತ್ತರ ಮಂಜೂರಾತಿ ನೀಡಿದೆ ಹಾಗೂ ಇಲಾಖೆಯ ಈ ಕೆಳಕಂಡ 7 ಪಶುವೈದ್ಯಕೀಯ ಪರೀಕ್ಷಕರು/ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರಗಳಿಗೆ ದೂರವಾಣಿ ಹಾಗೂ ಅಂತರ್ಜಾಲ ಸಂಪರ್ಕ ಸೌಲಭ್ಯಗಳನ್ನು ಪಡೆಯಲು ಅನುಮತಿ ನೀಡಲಾಗಿದೆ.

(i) ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ತುಮಕೂರು.
(ii) ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಹಾಸನ.
(iii) ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಗುಲ್ಬರ್ಗಾ
(iv) ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ಬಳ್ಳಾರಿ.
(v) ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ಮಳವಳ್ಳಿ, ಮಂಡ್ಯ ಜಿಲ್ಲೆ.
(vi) ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ದಾವಣಗೆರೆ.
(vii) ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ಬೆಳಗಾವಿ.

ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಧಾರವಾಡ ಹಾಗೂ ಮೇಲ್ಕಂಡ 7 ಕೇಂದ್ರಗಳಿಗೆ ಅಂತರ್ಜಾಲ ಸಂಪರ್ಕದೊಂದಿಗೆ ದೂರವಾಣಿ ಸೌಲಭ್ಯ ಪಡೆಯಲು ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2403-00-109-0-01 ಉಪಶೀರ್ಷಿಕೆ 200 (ನಿರ್ವಹಣೆ) (ಯೋಜನೇತರ) ಅಡಿಯಲ್ಲಿ ಲಭ್ಯವಿರುವ ಅನುದಾನದಲ್ಲಿಯೇ ವೆಚ್ಚ ಭರಿಸತಕ್ಕದ್ದು. ಸರ್ಕಾರದಿಂದ ಹೆಚ್ಚುವರಿ ಅನುದಾನವನ್ನು ಕೋರತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 469 ವೆ. 4/2010, ದಿನಾಂಕ: 19-01-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ.ನಾಗರಾಜ**
ಪೀಠಾಧಿಕಾರಿ-2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ-ಎ)

ಪಿ.ಆರ್. 409

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004 ದಿನಾಂಕ: 11-10-2004.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004 ದಿನಾಂಕ: 24-1-2005.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004 ದಿನಾಂಕ: 13-11-2008.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004 ದಿನಾಂಕ: 25-9-2009.
5. ವಿಚಾರಣಾಧಿಕಾರಿಗಳಾದ ಶ್ರೀ ಫ.ನೀ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 8-11-2010 ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ ಪ್ರಸ್ತುತ ನಿವೃತ್ತ ಇವರು ಈ ಹಿಂದೆ ಮುಂಡರಗಿ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮುಂಡರಗಿ ತಾಲ್ಲೂಕಿನ ಗಂಗಾಪುರ ಗೋಶಾಲೆಯ ನಿರ್ವಹಣೆಯಲ್ಲಿ ಹಾಗೂ ಗೋಶಾಲೆಗೆ ಮೇವು ಖರೀದಿ ಮಾಡಿರುವ ವ್ಯವಹಾರದಲ್ಲಿ ಅವ್ಯವಹಾರ ಮಾಡಿದ ಬಗ್ಗೆ ಗದಗ ಉಪ ವಿಭಾಗಾಧಿಕಾರಿಗಳ ನೇತೃತ್ವದ ತಂಡದಿಂದ ತನಿಖೆ ನಡೆಸಿ, ಪಡೆದಿರುವ ವರದಿ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿ, ಇವರ ವಿರುದ್ಧ ಸರ್ಕಾರದ ಹಣ ದುರುಪಯೋಗ ಹಾಗೂ ಕರ್ತವ್ಯಲೋಪಗಳನ್ನು ಸರ್ಕಾರಕ್ಕೆ ತಿಳಿಸಿರುತ್ತಾರೆ. ಮುಂದುವರೆದು, ಸದರಿ ಗೋಶಾಲೆಯಲ್ಲಿ ನಡೆದ ಮೇವು ಖರೀದಿಯ ಹಣ ಪಾವತಿಸುವಂತೆ ಜಿಲ್ಲಾಧಿಕಾರಿಗಳಿಗೆ ದಿನಾಂಕ: 1-9-2004 ರಂದು ಉದ್ದಟತನದ ಪತ್ರ ಬರೆದು, ಒಬ್ಬ ಸರ್ಕಾರಿ ನೌಕರನಿಗೆ ತಕ್ಕದಲ್ಲದ ರೀತಿಯಲ್ಲಿ ವರ್ತಿಸಿ, ಕೆ.ಸಿ.ಎಸ್ (ನಡತೆ) ನಿಯಮಾವಳಿಗಳನ್ನು ಉಲ್ಲಂಘಿಸಿದ್ದಾಗಿ ತಿಳಿಸಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮತ್ತು ಅವರ ಅಸಮಂಜಸ ಹಾಗೂ ಅತೃಪ್ತಿಕರ ಕಾರ್ಯನಿರ್ವಹಣೆಯಿಂದಾಗಿ ಮುಂಡರಗಿ ತಾಲ್ಲೂಕಿನಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಹದಗೆಡುವ ಎಲ್ಲಾ ಸಾಧ್ಯತೆ ಇರುವುದರಿಂದ, ಅವರನ್ನು ಬೇರೆ ಜಿಲ್ಲೆಗೆ ವರ್ಗಾಯಿಸುವಂತೆ ಕೋರಿ ಜಿಲ್ಲಾಧಿಕಾರಿಗಳು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರದ ದಿನಾಂಕ: 11-10-2004 ರ ಆದೇಶದಲ್ಲಿ, ಶ್ರೀ ಟಿ.ಎಲ್. ನಾಯಕ್, ತಹಶೀಲ್ದಾರ್, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ ಇವರನ್ನು ಅವರ ವಿರುದ್ಧದ ಇಲಾಖಾ

ವಿಚಾರಣೆಯನ್ನು ಕಾಯ್ದಿರಿಸಿ, ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ಸರ್ಕಾರದ ದಿನಾಂಕ: 24–1–2005 ರ ಆದೇಶದಲ್ಲಿ, ಶ್ರೀ ಟಿ.ಎಲ್. ನಾಯಕ್, ಅಮಾನತ್ತುಗೊಂಡ ತಹಶೀಲ್ದಾರ್ ಇವರನ್ನು 1957 ರ ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಕೂಡಲೇ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಅವರನ್ನು ಖಾಲಿ ಇರುವ ಹೊಸಕೋಟೆ ತಾಲ್ಲೂಕು ತಹಶೀಲ್ದಾರರ ಹುದ್ದೆಗೆ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿತ್ತು.

ಶ್ರೀ ಟಿ.ಎಲ್.ನಾಯಕ್, ತಹಶೀಲ್ದಾರ್ ಇವರಿಗೆ ಸರ್ಕಾರದಿಂದ ದಿನಾಂಕ: 29–3–2006 ರಂದು ಜಾರಿ ಮಾಡಲಾಗಿದ್ದ ಕಾರಣ ಕೇಳುವ ನೋಟೀಸಿಗೆ ನಿಗದಿತ ಅವಧಿಯಲ್ಲಿ ತಮ್ಮ ಸಮಜಾಯಿಷಿಯನ್ನು ನೀಡಿರುವುದಿಲ್ಲವಾದ್ದರಿಂದ, ಸದರಿಯವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (3) ದಿನಾಂಕ: 13–11–2008 ರ ಸರ್ಕಾರದ ಆದೇಶದಲ್ಲಿ, ಶ್ರೀ ಎಸ್.ಜಿ. ಪಲ್ಲೇದ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ಅಧ್ಯಕ್ಷರು, ಜಿಲ್ಲಾ ಗ್ರಾಹಕರ ವೇದಿಕೆ, ಗದಗ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಗದಗ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತದೆ.

ಶ್ರೀ ಪಲ್ಲೇದ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಇವರು ದಿನಾಂಕ: 23–5–2009 ರ ಮನವಿಯಲ್ಲಿ, ಆಪಾದಿತರು ಪರಿಚಿತರಾಗಿರುವುದರಿಂದ ತಮಗೆ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಇಚ್ಛೆ ಇಲ್ಲವೆಂದು ಹಾಗೂ ಬೇರೆಯವರನ್ನು ನೇಮಿಸಲು ಕೋರಿದ್ದರಿಂದ, ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ಸರ್ಕಾರದ ದಿನಾಂಕ: 25–9–2009 ರ ಆದೇಶದಲ್ಲಿ, ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆ ನಡೆಸುವ ಪ್ರಕರಣಕ್ಕೆ ಸಂಬಂಧಿಸಿದಂತೆ, ಬೇರೆ ವಿಚಾರಣಾಧಿಕಾರಿಗಳನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ, ಶ್ರೀ ಫ.ನೀ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಹಶೀಲ್ದಾರ್, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತದೆ.

ಸರ್ಕಾರದ ದಿನಾಂಕ: 25–9–2009 ರ ಆದೇಶದಂತೆ, ವಿಚಾರಣಾಧಿಕಾರಿಗಳಾದ ಶ್ರೀ ಫ.ನೀ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ರವರು ಪ್ರಕರಣದ ಕುರಿತು ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಂತೆ ದಿನಾಂಕ: 8–11–2010 ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ, ಮೇಲಿನ ಇಲಾಖಾ ವಿಚಾರಣೆ ಪ್ರಕರಣದಲ್ಲಿ, ಅನುಬಂಧ–1 ಮತ್ತು 2 ರಲ್ಲಿ ದೂರಿರುವ 1 ರಿಂದ 12 ರವರೆಗಿನ ಆರೋಪಗಳು ದೋಷಾರೋಪಿತ ಸರ್ಕಾರಿ ನೌಕರರ ಮೇಲೆ ನಿಚ್ಚಳವಾಗಿ ಮತ್ತು ನಿಸ್ಸಂದೇಹವಾಗಿ ರುಜುವಾತಾಗಿಲ್ಲವೆಂದು ವರದಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ವರದಿಯನ್ನು ಒಪ್ಪಿ, ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಎಡಿಇ 2004 ಬೆಂಗಳೂರು, ದಿನಾಂಕ: 29–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಟಿ.ಎಲ್. ನಾಯಕ್, ಹಿಂದಿನ ತಹಶೀಲ್ದಾರ್, ಮುಂಡರಗಿ ಪ್ರಸ್ತುತ ನಿವೃತ್ತ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಆದೇಶಿಸಿದೆ.

ದಿನಾಂಕ: 11–10–2004 ರಿಂದ 24–1–2005 ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 101ಬಿ ಪ್ರಕಾರ ಕರ್ತವ್ಯದ ಅವಧಿ ಎಂದು ಪರಿಗಣಿಸಿದೆ. ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಶ್ರೀಯುತರು ಈ ಪ್ರಕರಣದ ಮಟ್ಟಿಗೆ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 410

**ಎಸ್.ಬಿ.ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ :** 1. ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರ ಸಂ: ಸಿಎಎಲ್/ಸಿಆರ್/20/2010–11 ದಿನಾಂಕ: 15–11–2010.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯಲಾಗಿರುತ್ತದೆ. ಈ ಡೀಸೆಲ್ ಜನರೇಟರ್‌ನಿಂದ ವಿದ್ಯುಚ್ಛಕ್ತಿ ಪಡೆದು ಮನೆ ನಿರ್ಮಾಣಕ್ಕೆ ನೀರನ್ನು ಒದಗಿಸಲಾಗಿರುತ್ತದೆ. ಆದುದರಿಂದ, ಈ ಡೀಸೆಲ್ ಜನರೇಟರ್‌ನ ಬಾಡಿಗೆಯ ಹಣ ರೂ. 1,04,965/– ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 402 ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 07-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ರೂ. 1,04,965/–(ರೂಪಾಯಿ ಒಂದು ಲಕ್ಷದ ನಾಲ್ಕು ಸಾವಿರದ ಒಂಬೈನೂರ ಅರವತ್ತೈದು ಮಾತ್ರ) ನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235–00–111–0–02 Public Contributions to the Calamity Relief ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯೀಸ್ ರಸೀದಿ (ಸಿಟಿಎಸ್–8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು. ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಗಂಗಾಧರ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ.ನಿ & ಸೇವೆಗಳು–2)

ಪಿ.ಆರ್. 411

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಬನ್ನಾರಿ ಅಮ್ಮನ್ ಶುಗರ್ಸ್ ಲಿಮಿಟೆಡ್, ಚಿಲಕವಾಡಿ–ಟಗರಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಈ ಸಕ್ಕರೆ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಮೋದಹಳ್ಳಿ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆಗೆ ಸ್ಥಳಾಂತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 89 ಎಸ್‌ಪಿಐ 2008 ದಿನಾಂಕ: 03–05–2008.
2. ಕಾರ್ಖಾನೆಯ ಪತ್ರ ಸಂಖ್ಯೆ: BAS/BNG/192/2008 ದಿನಾಂಕ: 22–07–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಬನ್ನಾರಿ ಅಮ್ಮನ್ ಶುಗರ್ಸ್ ಲಿ., ಚಿಲಕವಾಡಿ ಟಗರಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಈ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕಿನ ಮೋದಹಳ್ಳಿ ಎಂಬಲ್ಲಿಗೆ ಸ್ಥಳಾಂತರಿಸಿಕೊಳ್ಳುವ ಮತ್ತು ಕಾರ್ಖಾನೆಯ ಸಾಮರ್ಥ್ಯ ಮತ್ತು ಸಹ ವಿದ್ಯುತ್ ಘಟಕದ ಸಾಮರ್ಥ್ಯ ವಿಸ್ತರಿಸಿಕೊಳ್ಳುವ ಬಂಡವಾಳ ಹೂಡಿಕೆ ಯೋಜನಾ ವರದಿಗೆ ಕೆಲವು ಮೂಲ ಸೌಲಭ್ಯ/ರಿಯಾಯಿತಿಗಳನ್ನು ನೀಡುವುದಾಗಿ ತಿಳಿಸಿ SHLCC ಯ ಅನುಮತಿ ನೀಡಿದೆ.

ಮೇಲೆ ಓದಲಾದ (2) ರಲ್ಲಿರುವ ಜನರಲ್ ಮ್ಯಾನೇಜರ್, ಬನ್ನಾರಿ ಅಮ್ಮನ್ ಶುಗರ್ಸ್ ಲಿ., ರವರ ಪತ್ರದಲ್ಲಿ–ಬನ್ನಾರಿ ಅಮ್ಮನ್ ಶುಗರ್ಸ್ ಲಿ., ಚಿಲಕವಾಡಿ–ಟಗರಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಈ ಸಕ್ಕರೆ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಕೊಳ್ಳೇಗಾಲ ತಾಲ್ಲೂಕಿನ ಮೋದಹಳ್ಳಿ ಗ್ರಾಮಕ್ಕೆ ಸ್ಥಳಾಂತರಿಸಿಕೊಳ್ಳಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸ್ಥಳಾಂತರಕ್ಕೆ ಸರ್ಕಾರದ ಅನುಮತಿ ನೀಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 217 ಎಸ್‌ಜಿಎಫ್ 2008 ಬೆಂಗಳೂರು, ದಿನಾಂಕ: 03–02–2011**

ಬನ್ನಾರಿ ಅಮ್ಮನ್ ಶುಗರ್ಸ್ ಲಿಮಿಟೆಡ್, ಚಿಲಕವಾಡಿ–ಟಗರಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಈ ಸಕ್ಕರೆ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು, ಮೋದಹಳ್ಳಿ ಎಂಬಲ್ಲಿಗೆ ಸ್ಥಳಾಂತರಿಸಿಕೊಳ್ಳಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 412

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಎನ್. ಕೃಷ್ಣಮೂರ್ತಿ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕೆಂಪನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(8)/ಪಪೂಅ/201/2004–05, ದಿನಾಂಕ : 5–3–2005.
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ1(8)/ಪಪೂಅ/201/2004–05, ದಿನಾಂಕ: 22–2–2006.
3) ಸರ್ಕಾರಿ ಆದೇಶ ಸಂಖ್ಯೆ; ವಾಕೈ 77 ರೇಇವಿ 2006, ದಿನಾಂಕ: 17–3–2006
4) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ1(8)/ಪಪೂಅ/201/2004–05, ದಿನಾಂಕ: 6–12–2006.

5) ಸರ್ಕಾರಿ ಆದೇಶ ಸಂ: ವಾಕೈ 77 ರೇಇವಿ 2006, ದಿನಾಂಕ: 31-1-2007.
6) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ1(8)/ಪಮೂಅ/201/2004–05, ದಿನಾಂಕ: 5–8–2010.

**ಪ್ರಸ್ತಾವನೆ:**

ಶ್ರೀ ಎನ್. ಕೃಷ್ಣಮೂರ್ತಿ, ರೇಷ್ಮೆ ಪ್ರದರ್ಶಕರು ಇವರು ದಿನಾಂಕ: 22–8–2002ರಲ್ಲಿ ರೇಷ್ಮೆ ಪ್ರದರ್ಶಕರ ಹುದ್ದೆಗೆ ಕರ್ತವ್ಯಕ್ಕೆ ಹಾಜರಾಗಿದ್ದು, ಇವರ ಪರಿವೀಕ್ಷಣಾ ಅವಧಿಯಲ್ಲಿ ಇವರು ನಿಗದಿತ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿಲ್ಲದ ಕಾರಣ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ರೇಷ್ಮೆ ಇಲಾಖೆಯ ನೌಕರರ ಪರಿವೀಕ್ಷಣಾ ಅವಧಿಯನ್ನು 22–8–2004 ರಿಂದ 21–8–2005 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಿರುತ್ತದೆ. ಹಾಗೂ ನೌಕರರು ಸದರಿ ಅವಧಿಯಲ್ಲಿಯೂ ನಿಗದಿತ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿಲ್ಲದ ಕಾರಣ ಇನ್ನೂ ಎರಡು ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ನೌಕರರು ಕೋರಿರುವ ಹಿನ್ನೆಲೆಯಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಕೋರಿದ್ದ ಕಾರಣ, ಮೇಲೆ ಓದಲಾದ ಕ್ರಮಸಂಖ್ಯೆ (3)ರ ಆದೇಶದಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 22–8–2005 ರಿಂದ 21–8–2006 ರವರೆಗೆ ವಿಸ್ತರಿಸಲಾಗಿರುತ್ತದೆ. ಸದರಿ ಅವಧಿಯಲ್ಲಿಯೂ ನೌಕರರು ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಳ್ಳದ ಕಾರಣ, ಪುನ: ರೇಷ್ಮೆ ಆಯುಕ್ತರು ನೌಕರರ ಪರಿವೀಕ್ಷಣಾ ಅವಧಿಯನ್ನು ಒಂದು ವರ್ಷದ ಅವಧಿಗೆ ದಿನಾಂಕ: 22–8–2006 ರಿಂದ 21–8–2007 ರವರೆಗೆ ಮಾತ್ರ ವಿಸ್ತರಿಸುವಂತೆ ಉಲ್ಲೇಖ (4)ರ ಪತ್ರದಲ್ಲಿ ಕೋರಿದ್ದ ಹಿನ್ನೆಲೆಯಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ಕೊನೆಯ ಬಾರಿಗೆ ದಿನಾಂಕ: 22–8–2006 ರಿಂದ 21–8–2007 ರವರೆಗೆ ವಿಸ್ತರಿಸಿ, ಮೇಲೆ ಓದಲಾದ ಕ್ರಮಸಂಖ್ಯೆ (5) ರಲ್ಲಿ ಆದೇಶವನ್ನು ಹೊರಡಿಸಲಾಗಿರುತ್ತದೆ. ನೌಕರರು ಇಲಾಖಾ ಪರೀಕ್ಷೆಯನ್ನು ದಿನಾಂಕ: 6–11–2008 ರಲ್ಲಿ ಪಾಸು ಮಾಡಿಕೊಂಡಿರುವ ಹಿನ್ನೆಲೆಯಲ್ಲಿ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 22–8–2007 ರಿಂದ 6–11–2008ರವರಗೆ ವಿಸ್ತರಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಪುನ: ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ನೌಕರರು ಹೃದಯ ಸಂಬಂಧ ಕಾಯಿಲೆಯಿಂದ ನರಳುತ್ತಿದ್ದು, ಹೃದಯ ಶಸ್ತ್ರ ಚಿಕಿತ್ಸೆಯಾಗಿರುವುದರಿಂದ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ವಿಳಂಬವಾಗಿ ತೇರ್ಗಡೆಯಾಗಿರುವುದನ್ನು ಹೊರತುಪಡಿಸಿದರೆ, ಸೇವೆಯಲ್ಲಿ ತೃಪ್ತಿಕರ ಕೆಲಸ ನಿರ್ವಹಿಸಿರುವುದಾಗಿಯೂ ಯಾವುದೇ ಅಸಾಧಾರಣ ರಜೆ, ಗೈರು ಹಾಜರಾಗಿರುವುದಿಲ್ಲವೆಂದು, ಯಾವುದೇ ಶಿಸ್ತು ಪ್ರಕರಣ ಇರುವುದಿಲ್ಲವೆಂದು ಕಾರ್ಯ ನಿರ್ವಹಣಾ ವರದಿಯಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲವೆಂದು ಮತ್ತು ವರದಿಗಳ ರೀತ್ಯಾ ಸೇವೆಯು ತೃಪ್ತಿಕರವಾಗಿರುತ್ತದೆ ಎಂದು ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಅವರು ಕೋರಿರುವಂತೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 144 ರೇಇವಿ 2010, ಬೆಂಗಳೂರು, ದಿನಾಂಕ: 02–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ಕೃಷ್ಣಮೂರ್ತಿ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಕೆಂಪನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1) (i) ರನ್ವಯ ದಿನಾಂಕ: 22–7–2007 ರಿಂದ 6–11–2008 ರವರೆಗೆ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲ. ಈ ವಿಷಯದಲ್ಲಿ ಮೇಲ್ಕಂಡ ನಿಯಮಗಳ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಭಾರತಿ. ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್ 413

## ಯುವಜನ ಸೇವಾ ಸಚಿವಾಲಯ

**ವಿಷಯ** : ಶ್ರೀಮತಿ ಕೆ. ಉಮಾಲಕ್ಷ್ಮಿ, ಸಹಾಯಕ ನಿರ್ದೇಶಕರು, ಯು.ಸೇ.ಕ್ರೀ.ಇಲಾಖೆ, ಕೋಲಾರ, ಇವರ ನಿಯೋಜನೆ ಅವಧಿಯನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 159 ಯುಇಸೇ09, ದಿನಾಂಕ: 11-01-2010.
2) ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರ ಪತ್ರಸಂಖ್ಯೆ: ಡಿವೈಎಸ್ಎಸ್ : ಸಿ1: 16:09–10, ದಿನಾಂಕ: 23/27–10–2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಕೆ. ಉಮಾಲಕ್ಷ್ಮಿ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಇವರನ್ನು ಕೋಲಾರ ಜಿಲ್ಲೆಯಲ್ಲಿ ಖಾಲಿಯಿದ್ದ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ವಂತ ವೇತನ ಶ್ರೇಣಿ ಹಾಗೂ ವೇತನದ ಮೇಲೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ನಿಯೋಜನೆ ಮೇಲೆ ನೇಮಿಸಲಾಗಿತ್ತು.

ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 23–10–2010ರ ಪತ್ರದಲ್ಲಿ ಶ್ರೀಮತಿ ಕೆ. ಉಮಾಲಕ್ಷ್ಮಿ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕೋಲಾರ ಅವರ ನಿಯೋಜನಾ ಅವಧಿಯನ್ನು ದಿ: 11–01–2010 ರಿಂದ ಮುಂದುವರೆಸುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 111 ಯುಇಸೇ 10 ಬೆಂಗಳೂರು, ದಿನಾಂಕ: 03–02–2011**

ಸರ್ಕಾರವು ಶ್ರೀಮತಿ ಕೆ. ಉಮಾಲಕ್ಷ್ಮಿ, ಸಹಾಯಕ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕೋಲಾರ ಜಿಲ್ಲೆ, ಇವರ ನಿಯೋಜನೆ ಅವಧಿಯನ್ನು ದಿನಾಂಕ: 11–01–2011ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

ಪಿ.ಆರ್ 414

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ** : ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ ನೀಡುವ ಕುರಿತು ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಮಮಇ : 57 ಮಅನಿ 2008: ದಿನಾಂಕ: 15-03-2008
2) ಸರ್ಕಾರಿ ಆದೇಶ ಸಂಖ್ಯೆ: ಮಮಅ :55:ಮಅನಿ:2010: ದಿನಾಂಕ: 31-07-2010 ಮತ್ತು 05.10.2010.
3) ವ್ಯವಸ್ಥಾಪಕ ನಿರ್ದೇಶಕರು, ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಮಅನಿ: ಲೆಕ್ಕಶಾಖೆ:1:2010-11:664 ದಿನಾಂಕ:18.12.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ರಾಜ್ಯದ ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಿಕ ರೂ.400/- ಗಳ ಮಾಸಾಶನವನ್ನು ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ನೇರವಾಗಿ ಖಜಾನೆಯಿಂದ ಹಣ ಸೆಳೆದು ಅರ್ಹ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡಲು ಅನುಮತಿ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2) ರ ಸರ್ಕಾರದ ಆದೇಶಗಳಲ್ಲಿ 2010-11ನೇ ಸಾಲಿನಲ್ಲಿ ಮಾಜಿ ದೇವದಾಸಿ ಮಹಿಳೆಯರಿಗೆ ಮೂರು ತಿಂಗಳ ಅವಧಿಗೆ ಮಾಸಿಕ ರೂ. 400/- ಗಳಂತೆ ಮಾಸಾಶನವನ್ನು ಪಾವತಿಸಲು ಮೊದಲನೇ ಕಂತಿನಲ್ಲಿ ರೂ. 175.00 ಲಕ್ಷಗಳನ್ನು ಮತ್ತು ಎರಡನೇ ಕಂತಾಗಿ ರೂ. 175.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3) ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪ್ರಸ್ತಾವನೆಯಲ್ಲಿ 2010-11ನೇ ಸಾಲಿನಲ್ಲಿ ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಿಕ ರೂ. 400/-ಗಳ ಮಾಸಾಶನವನ್ನು ಮೂರು ಮತ್ತು ನಾಲ್ಕನೇ ಕಂತಾಗಿ ರೂ.350.00 ಲಕ್ಷಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮ ಇ: 55: ಮಅನಿ: 2010, ಬೆಂಗಳೂರು, ದಿನಾಂಕ 05-02-2011**

**ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, 2010-11ನೇ ಸಾಲಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಮಾಜಿ ದೇವದಾಸಿ ಮಹಿಳೆಯರಿಗೆ ಮೂರು ತಿಂಗಳ ಅವಧಿಗೆ ಮಾಸಿಕ ರೂ.400/-ಗಳಂತೆ ಮಾಸಾಶನವನ್ನು ಪಾವತಿಸಲು ಮೂರನೇ ಕಂತಾಗಿ ರೂ.175.00 (ರೂಪಾಯಿ ಒಂದು ನೂರಾ ಎಪ್ಪತ್ತೈದು ಲಕ್ಷಗಳು ಮಾತ್ರ) ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ. ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ನೇರವಾಗಿ ಖಜಾನೆಯಿಂದ ಹಣ ಸೆಳೆದು ಅರ್ಹ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಜಮಾ ಮಾಡುವುದು ಹಾಗೂ ಸದರಿ ಮೊಬಲಗನ್ನು ಉಪಯೋಗಿಸಿ, ತಕ್ಷಣವೇ ಉಪಯುಕ್ತತಾ ಪ್ರಮಾಣ ಪತ್ರವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರಿಗೆ ಸಲ್ಲಿಸುವುದು.**

**ಇದಕ್ಕೆ ತಗಲುವ ವೆಚ್ಚವನ್ನು ಮಾಜಿ ದೇವದಾಸಿಯರಿಗೆ ಮಾಸಾಶನ ಪಿಂಚಣಿ ಮತ್ತು ನಿವೃತ್ತಿ ಸೌಲಭ್ಯಗಳು ಲೆಕ್ಕ ಶೀರ್ಷಿಕೆ 2235-02-103-0-53-251 (ಯೋಜನೆ) ಅಡಿಯಲ್ಲಿ ಒದಗಿಸಿರುವ ಆಯವ್ಯಯದಲ್ಲಿ ಭರಿಸುವುದು.**

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 18 ವೆಚ್ಚ-3/09 ದಿನಾಂಕ: 20-01-2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:1:ಟಿಎಫ್‌ಪಿ:2008, ದಿನಾಂಕ: 16.05.2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

ಸರ್ಕಾರಿ ಆದೇಶ ಸಂಖ್ಯೆ: ಮಮಇ 55 ಮಅನಿ 2010, ದಿನಾಂಕ: 05.02.2011.

2010-11ನೇ ಸಾಲಿನಲ್ಲಿ ಅರ್ಹರಿರುವ ಮಾಜಿ ದೇವದಾಸಿಯರಿಗೆ ಬಿಡುಗಡೆ ಮಾಡುತ್ತಿರುವ 3ನೇ ಕಂತಿನ ಮಾಸಾಶನದ ವಿವರ

| ಕ್ರ. ಸಂ. | ಜಿಲ್ಲೆಗಳು/ ತಾಲ್ಲೂಕುಗಳು | 2010-11ನೇ ಸಾಲಿನ ಫಲಾನುಭವಿಗಳ ಸಂಖ್ಯೆ | 1ನೇ ಕಂತಿನ ಅನುದಾನ | 2ನೇ ಕಂತಿನ ಅನುದಾನ | 3ನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| | ಬಿಜಾಪುರ ಜಿಲ್ಲೆ | | | | |
| | (1) ಬಿಜಾಪುರ | 738 | 885600 | 885600 | 590400 |
| | (2) ಇಚಿಡಿ | 98 | 117600 | 117600 | 117600 |
| | (3) ಸಿಂದಗಿ | 253 | 303600 | 303600 | 202400 |
| | (4) ಬಿ.ಬಾಗೇವಾಡಿ | 529 | 634800 | 634800 | 634800 |
| | (5) ಮುದ್ದೇಬಿಹಾಳ | 392 | 470400 | 470400 | 367600 |
| | ಒಟ್ಟು | **2010** | **2412000** | **2412000** | **1912800** |

| | | | | | |
|---|---|---|---|---|---|
| | ಬಾಗಲಕೋಟೆ | | | | |
| | (1)ಬಾಗಲಕೋಟೆ | 331 | 264800 | 529600 | 397200 |
| | (2)ಜಮಖಂಡಿ | 830 | 664000 | 1328000 | 996000 |
| | (3)ಮುಧೋಳ | 917 | 758000 | 1442800 | 1100400 |
| | (4)ಬೀಳಗಿ | 308 | 369600 | 369600 | 369600 |
| | (5)ಬಾದಾಮಿ | 308 | 246400 | 492800 | 369600 |
| | (6)ಹುನಗುಂದ | 224 | 179200 | 358400 | 268800 |
| | ಒಟ್ಟು | **2918** | **2482000** | **452100** | **3501600** |
| | ಬೆಳಗಾವಿ | | | | |
| | (1)ಬೆಳಗಾವಿ (ನ) | 20 | 24000 | 16000 | 16000 |
| | (2)ಅಥಣಿ | 602 | 722400 | 481600 | 481600 |
| | (3)ರಾಯಭಾಗ | 603 | 723600 | 482400 | 482400 |
| | (4)ಸವದತ್ತಿ | 152 | 182400 | 121600 | 121600 |
| | (5)ಹುಕ್ಕೇರಿ | 461 | 553200 | 368800 | 368800 |
| | (6)ಗೋಕಾಕ | 439 | 526800 | 351200 | 351200 |
| | (7)ಚಿಕ್ಕೋಡಿ | 308 | 369600 | 246400 | 246400 |
| | (8)ಖಾನಾಪುರ | 22 | 26400 | 17600 | 17600 |
| | (9)ಬೈಲಹೊಂಗಲ | 71 | 85200 | 56800 | 56800 |
| | 10)ರಾಮದುರ್ಗ | 448 | 537600 | 358400 | 358400 |
| | ಒಟ್ಟು | **3126** | **3751200** | **2500800** | **2500800** |

| | | | | | |
|---|---|---|---|---|---|
| | ಬಳ್ಳಾರಿ | | | | |
| | (1)ಹೊಸಪೇಟೆ | 538 | 645600 | 645600 | 645600 |
| | (2)ಸಂಡೂರು | 747 | 896400 | 896400 | 896400 |
| | ಒಟ್ಟು | **1285** | **1542000** | **1542000** | **1542000** |
| | ಕೊಪ್ಪಳ | | | | |
| | (1)ಕೊಪ್ಪಳ | 612 | 734400 | 489600 | 979200 |
| | (2)ಗಂಗಾವತಿ | 734 | 880800 | 587200 | 1174400 |
| | (3)ಯಲಬುರ್ಗಾ | 236 | 283200 | 188800 | 377600 |
| | (4) ಕುಷ್ಟಗಿ | 243 | 291600 | 194400 | 388800 |
| | ಒಟ್ಟು | **1825** | **2190000** | **1460000** | **2920000** |
| | ರಾಯಚೂರು | | | | |
| | (1)ರಾಯಚೂರು | 160 | 192000 | 192000 | 192000 |
| | (2)ಮಾನ್ವಿ | 451 | 541200 | 541200 | 541200 |
| | (3)ದೇವದುರ್ಗ | 393 | 471600 | 471600 | 471600 |
| | (4)ಲಿಂಗಸಗೂರು | 526 | 631200 | 631200 | 631200 |
| | (5)ಸಿಂಧನೂರು | 460 | 552000 | 555200 | 552000 |
| | ಒಟ್ಟು | 1990 | 2388000 | 2391200 | 2388000 |
| | ಗುಲ್ಬರ್ಗಾ | | | | |
| | (1)ಸುರಪುರ | 120 | 144000 | 96000 | 144000 |
| | (2)ಶಹಾಪುರ | 146 | 175200 | 116800 | 175200 |
| | (3)ಯಾದಗಿರಿ | 30 | 36000 | 24000 | 36000 |
| | (4)ಜೇವರ್ಗಿ | 87 | 104400 | 69600 | 104400 |
| | (5)ಆಳಂದ | 129 | 154800 | 103200 | 154800 |
| | (6)ಚಿತ್ತಾಪುರ | 64 | 76800 | 51200 | 76800 |
| | (7)ಸೇಡಂ | 11 | 13200 | 8800 | 13200 |
| | (8)ಅಫ್ಜಲ್ ಪುರ | 35 | 42000 | 28000 | 42000 |
| | (9)ಚಿಂಚೋಳಿ | 2 | 0 | 0 | 0 |
| | ಒಟ್ಟು | 624 | 746400 | 497600 | 746400 |
| | ಗದಗ | | | | |
| | (1)ಗದಗ | 164 | 196800 | 196800 | 196800 |

| | | | | | |
|---|---|---|---|---|---|
| | (2)ಶಿರಹಟ್ಟಿ | 198 | 237600 | 237600 | 237600 |
| | (3)ರೋಣ | 251 | 301200 | 301200 | 301200 |
| | (4)ಮುಂಡರಗಿ | 82 | 98400 | 98400 | 98400 |
| | (5)ನರಗುಂದ | 49 | 58800 | 58800 | 58800 |
| | ಒಟ್ಟು | 744 | 892800 | 892800 | 892800 |
| | ಧಾರವಾಡ | | | | |
| | (1)ಧಾರವಾಡ(ಗ್ರಾ) | 43 | 51600 | 68800 | 51600 |
| | (2)ಹುಬ್ಬಳ್ಳಿ (ಗ್ರಾ) | 48 | 57600 | 76800 | 57600 |
| | (3)ಹುಬ್ಬಳ್ಳಿ ಧಾರವಾಡ | 150 | 180000 | 240000 | 180000 |
| | (4)ಕುಂದಗೋಳ | 130 | 156000 | 208000 | 156000 |
| | (5)ಕಳಘಟಗಿ | 30 | 36000 | 48000 | 36000 |
| | (6)ನವಲಗುಂದ | 66 | 79200 | 105600 | 79200 |
| | ಒಟ್ಟು | 467 | 560400 | 747200 | 560400 |
| | ಹಾವೇರಿ | | | | |
| | (1)ಹಾವೇರಿ | 128 | 153600 | 153600 | 153600 |
| | (2)ರಾಣೆಬೆನ್ನೂರು | 88 | 105600 | 105600 | 105600 |
| | (3)ಶಿಗ್ಗಾಂವ | 42 | 50400 | 50400 | 50400 |
| | (4)ಹಿರೇಕೆರೂರು | 50 | 60000 | 60000 | 60000 |
| | (5)ಹಾನಗಲ್ | 16 | 19200 | 19200 | 19200 |
| | (6)ಸವಣೂರು | 95 | 114000 | 114000 | 114000 |
| | (7)ಬ್ಯಾಡ್ಗಿ | 27 | 32400 | 32400 | 32400 |
| | ಒಟ್ಟು | 446 | 535200 | 535200 | 535200 |
| | Grand Total | 15435 | 17500000 | 17500000 | 17500000 |

**ಬಿ. ಕಮಲಮ್ಮ**
ಪಿ.ಆರ್ 415
ಸರ್ಕಾರದ ಅಧೀನ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಕರ್ನಾಟಕ ಮರಳು ನೀತಿ-2011ರ ಅನುಷ್ಠಾನಕ್ಕಾಗಿ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾಮಟ್ಟದ ಮರಳು ಗಣಿಗಾರಿಕೆ ಪರವಾನಿಗೆ ಮಂಜೂರಾತಿ/ಉಸ್ತುವಾರಿ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ:** ದಿನಾಂಕ: 29-1-2011ರ ಆದೇಶ ಸಂಖ್ಯೆ:ಸಿಐ.84. ಎಂಎಂಎನ್. 2009

**ಪ್ರಸ್ತಾವನೆ:**

ರಾಜ್ಯದಲ್ಲಿನ ಮರಳು ಪ್ರದೇಶಗಳನ್ನು ಪ್ರಸ್ತುತ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ, 1994ರ ನಿಯಮ 21(2-ಇ) ಯಂತೆ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡಲಾಗುತ್ತಿದೆ. ರಾಜ್ಯದಲ್ಲಿ ಒಟ್ಟು 8614 ಎಕರೆಗಳ ಪ್ರದೇಶದಲ್ಲಿ 1610 ಬ್ಲಾಕ್‌ಗಳನ್ನು ಮರಳು ಹರಾಜು ಪ್ರದೇಶಗಳೆಂದು ಗುರ್ತಿಸಲಾಗಿದ್ದು, ಸ್ಥಳೀಯ ಸಮಸ್ಯೆಗಳಿಂದಾಗಿ ಹರಾಜು ಪ್ರಕ್ರಿಯೆಯು ಕೆಲವೊಂದು ಕಡೆ ಸರಿಯಾಗಿ ನಡೆಯದೇ 1054 ಎಕರೆ ವಿಸ್ತೀರ್ಣದ 293 ಬ್ಲಾಕ್‌ಗಳನ್ನು ಮಾತ್ರವೇ ಹರಾಜು ಮಾಡಲಾಗಿರುತ್ತದೆ. ಅಲ್ಲದೇ, ಸಾರ್ವಜನಿಕರು, ಪರಿಸರವಾದಿಗಳು, ಜನಪ್ರತಿನಿಧಿಗಳು ನಾನಾ ಕಾರಣಗಳಿಗಾಗಿ, ಪ್ರಮುಖವಾಗಿ ಅಂತರ್ಜಲ ಮಟ್ಟದಲ್ಲಿ ಕುಸಿತ ಉಂಟಾಗುವುದೆಂದೂ, ಪರಿಸರಕ್ಕೆ ಹಾಗೂ ಜೀವ ಸಂಕುಲಕ್ಕೆ ಹಾನಿಯುಂಟಾಗುವುದೆಂಬ ಕಾರಣಗಳಿಗಾಗಿ ಮರಳು ಗಣಿಗಾರಿಕೆಗಾಗಿ ಹರಾಜು ಪ್ರಕ್ರಿಯೆ ನಡೆಸಬಾರದೆಂದು ಅಡಚಣೆಯುಂಟು ಮಾಡಿರುತ್ತಾರೆ. ಕೆಲವು ಸಂದರ್ಭಗಳಲ್ಲಿ, ಈ ಕಾರಣಗಳಿಗಾಗಿ ಇವರುಗಳು ನ್ಯಾಯಾಲಯಗಳ ಮೆಟ್ಟಿಲೇರಿರುವುದೂ ಉಂಟು. ಕ್ರಮೇಣವಾಗಿ ಸಾದಾ ಮರಳಿನ ಲಭ್ಯತೆಯ ಪ್ರಮಾಣವು ಕುಗ್ಗಿದ್ದು, ಪರಿಸರಕ್ಕೆ ಧಕ್ಕೆಯುಂಟು ಮಾಡುವ ಫಿಲ್ಟರ್ ಮರಳಿನ ಉತ್ಪಾದನೆ ಹೆಚ್ಚಾಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಭೌಗೋಳಿಕ ಹಾಗೂ ಆಡಳಿತಾತ್ಮಕ ಹಿನ್ನೆಲೆಯನ್ನು ಗಮನದಲ್ಲಿರಿಸಿಕೊಂಡು ರಾಜ್ಯದಲ್ಲಿ ಹೊಸ ಮರಳುನೀತಿಯನ್ನು ಜಾರಿಗೊಳಿಸುವ ಅವಶ್ಯಕತೆಯನ್ನು ಸರ್ಕಾರವು ಮನಗಂಡಿದ್ದು, ಕರ್ನಾಟಕ ಮರಳು ನೀತಿ 2011ನ್ನು ದಿನಾಂಕ:01-04-2011ರಿಂದ ಜಾರಿಗೆ ಬರುವಂತೆ ಮೇಲೆ ಓದಲಾಗಿರುವ ದಿನಾಂಕ: 29-1-2011ರ ಆದೇಶವನ್ನು ಹೊರಡಿಸಿರುತ್ತದೆ. ಕರ್ನಾಟಕ ಮರಳು ನೀತಿ 2011ರ ಅನ್ವಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾಮಟ್ಟದ ಮರಳು ಗಣಿಗಾರಿಕೆ ಪರವಾನಿಗೆ ಮಂಜೂರಾತಿ/ಉಸ್ತುವಾರಿ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದ್ದು, ಅಂತೆಯೇ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 84 ಎಂಎಂಎನ್ 2009 ಬೆಂಗಳೂರು, ದಿನಾಂಕ 09-02-2011.**

ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆಯ ನಿಯಂತ್ರಣಕ್ಕೆ ಈ ಹಿಂದೆ ಸರ್ಕಾರವು ಜಿಲ್ಲಾಮಟ್ಟದ ಮಾನಿಟರಿಂಗ್ ಸಮಿತಿಗಳನ್ನು ದಿನಾಂಕ: 06-08-2005ರ ಆದೇಶ ಸಂಖ್ಯೆ: ಸಿಐ.05.ಎಂಎಂಎನ್. 2005ರಂದು ರಚಿಸಿದ್ದು, ಸದರಿ ಸಮಿತಿಗಳನ್ನು ಈ ಮೂಲಕ ರದ್ದುಪಡಿಸಿದೆ. ರಾಜ್ಯದಲ್ಲಿ ಹೊಸ ಮರಳು ನೀತಿ 2011ನ್ನು ಪರಿಣಾಮಕಾರಿಯಗಿ ಜಾರಿಗೊಳಿಸುವ ದಿಸೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಂದಿಗೆ ಜಿಲ್ಲಾಮಟ್ಟದ ಮರಳು ಗಣಿಗಾರಿಕೆ ಪರವಾನಿಗೆ ಮಂಜೂರಾತಿ/ಉಸ್ತುವಾರಿ ಸಮಿತಿಯನ್ನು ಸರ್ಕಾರವು ರಚಿಸಿದೆ.

ಜಿಲ್ಲಾ ಮಟ್ಟದ ಮರಳು ಉಸ್ತುವಾರಿ /ಮರಳು ಗಣಿಗಾರಿಕೆ ಸಮಿತಿ

| | | |
|---|---|---|
| 1 | ಜಿಲ್ಲೆಯ ಜಿಲ್ಲಾಧಿಕಾರಿ | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತಿ | ಸದಸ್ಯರು |
| 3 | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ | ಸದಸ್ಯರು |
| 4 | ಕಾರ್ಯ ನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 5 | ಉಪ ಅರಣ್ಯ ಸಂರಕ್ಷಣಾಧಿಕಾರಿ | ಸದಸ್ಯರು |
| 6 | ಪ್ರಾದೇಶಿಕ ಸಾರಿಗೆ ಅಧಿಕಾರಿ | ಸದಸ್ಯರು |
| 7 | ಪರಿಸರ ಮಾಲಿನ್ಯ ನಿಯಂತ್ರಣಾಧಿಕಾರಿ | ಸದಸ್ಯರು |
| 8 | ಆಯಾ ಪ್ರದೇಶದ ತಹಸೀಲ್ದಾರ್ | ಸದಸ್ಯರು |
| 9 | ಉಪ ನಿರ್ದೇಶಕರು/ಹಿರಿಯ ಭೂವಿಜ್ಞಾನಿ | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯು ನಿಗದಿತವಾಗಿ ಸಭೆಸೇರಿ ನಿಯಮಾನುಸಾರ ಅವಶ್ಯವಿರುವ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್ 416

## COMMERCE & INDUSTRIES SECRETARIAT

**Sub :-** State Policy for Special Economic Zones-2009. Amendment of para III 5(i) (a) and para III 5(ii)(a)-reg.

**Read :-**
(1) Govt. Order No: CI 114 SPI 2007, dated: 28.02.2009,
(2) Proceedings of the meeting of Monitoring and Review Committee dated: 26.06.2010.
(3) Govt. Order No: CI 114 SPI 2007, dated: 29.10.2009.
(4) Approval of the Cabinet Meeting dated: 14.01.2011, vide C: 648/2010.

**PREAMBLE:**

As per Central SEZ Act 2005 and Rules 2006, the Government of Kanataka has formulated and announced State Policy for Special Econiomic Zones – 2009 on 28.02.2009. In the said policy, under Fiscal Benefits chapter para III 5(i) (a) and III para 5 (ii) (a) reads as below:

**III 5 (i) (a)- For SEZ developer and Co- developers**

All purchases excluding purchase of petroleum products from domestic tariff area for authorized operation of entire area in SEZs shall be exempted from State and local body taxes or levies or cess such as Sales Tax, Vat, Entry Tax and Special Entry Tax. This exemption will not be available for the goods sold in the domestic tariff area with or without value addition.

**III 5 (ii) (a)- For SEZ units**

All purchases excluding purchase of petroleum products by SEZ units located in the processing areas from domestic tariff area or SEZ area for its set up, operation or maintenance or for use in manufacture, trading, production, processing, assembling, repairing, reconditioning, re-engineering or packing shall be exempted from State and local body taxes or levies or cess such as Sales Tax, VAT, Entry tax and Special Entry Tax. This exemption will not be available for the goods sold in the domestic tariff area with or without value addition, if sold, applicable State taxes are levied.

Third Monitoring and Review Committee of SEZs meeting was held under the Chaimanship of the Chief Secretary to Government on 26.06.2010. In the said meeting, the Principal Secretary to Government, Finance Department informed that large housing, service apartment, hotel, school, recreations club, shopping complex etc., will be established in the non-processing area where no manufacturing/Service activities will take place. So the Finance Department felt that there is no need in extending the VAT exemption as per KVAT 2003 to non-processing area. The committee agreed with the Finance Department views and advised the Commerce and Industries Department to amend the State Policy for SEZs 2009 in line with the KVAT 2003 extending exemption only to the processing area of SEZ.

The Principal Secretary to Government, Finance Department also informed that the KVAT Law provides exemption of VAT to some petroleum products such as Naptha, Lubricants, etc covered under KVAT Act and accordingly the State Policy for SEZs 2009 may be amended in line with KVAT 2003. However, the petroleum products covered under KST does not fall under exemption of taxes for SEZs.

In the Monitoring & Review Committee meeting of SEZ held on 26.06.2010 under Chairmanship of Chief Secretary to Government, it has been resolved to amend the State Policy for SEZs-2009 under Fiscal Benefits chapter para III 5(i) (a) and para III 5 (ii) (a).

Government has Examined the proposal in detail.

Hence, the following Order.

**Government Order No. CI 114 SPI 2007 (P-1) Bangalore, dated : 07-02-2011**

In view of the circumstances explained above, the Government is pleased to substitute Para III 5 (i) (a) and Para III 5 (ii) (a) under Fiscal Benefits Chapter of State Policy for Special Economic Zones 2009, with the following:

**III 5 (i) (a)- For SEZ developer and Co-developers**

**VAT** levied on sales made by dealers by dealers in domestic tariff area to SEZ developers and co- developers for development, operation and maintenance of processing area in SEZ shall be exempted. This shall be by way of refund to SEZ developers / co- developers of VAT charged in the corresponding sale bills issued by sellers to them.

State taxes such as Entry Tax and Special Entry Tax and local body taxes / levies or cess, which are payable on supplies of goods (excluding petroleum products covered under KST Act) made by dealers in the Domestic Tariff Area to developers and co-developers for development operation and maintenance of processing area in SEZ, shall be exempted.

The aforesaid tax relief will not be available on those goods which are produced by developers / co-developers from domestic tariff area and resold in domestic tariff area or used in the manufacture of goods which are sold in domestic tariff area with or without value addition.

**III 5 (ii) (a)-For SEZ units**

VAT levied on sales made by dealers in domestic tariff area to SEZ units located in the processing areas for use in their set up, operation or maintenance or for use in manufacture, trading, production, processing, assembling, repairing, reconditioning, re-engineering or packing shall be exempted. This shall be by way of refund to the SEZ units of VAT charged in the corresponding sale bills issued by sellers to them.

State taxes such as Entry Tax and Special Entry Tax and local body taxes /levies or cess, which are payale on supplies of goods (excluding petroleum products covered under KST Act) made by dealers in the Domestic Tariff Area to SEZ units (located in processing area) for set up, operation or maintenance or for use in manufacture, trading, production, processing, assembling, repairing, reconditioning, re-engineering or packing, shall be exempted.

"The aforesaid tax relief will not be available on those goods which are produced by SEZ Units from domestic tariff area and resold in domestic area or used in the manufacture of goods which are sold in domestic tariff area with or without value addition."

By Order and in the name of the Governor of Karnataka,

P.R. 417

**A.V. Srinivasa Dikshit**

Desk Officer(Technical Cell)

Commerce & Industries Department.

## ಯುವಜನ ಸೇವಾ ಸಚಿವಾಲಯ

**ವಿಷಯ** : 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಕೈಗೊಳ್ಳಲಾದ ಈಜುಕೊಳ ಮತ್ತು ಕ್ರೀಡಾಂಗಣ ನಿರ್ಮಾಣ ಯೋಜನೆಯ 2010–11ನೇ ಸಾಲಿನ ಮೌಲ್ಯಮಾಪನ ಯೋಜನಾ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಯುಸೇಇ 65 ಸಮನ 10, ದಿನಾಂಕ 20–12–2010

2) ಪತ್ರಸಂಖ್ಯೆ: ಸಿಪಿಡಿ/ಡಿವೈಎಸ್ಎಸ್/ಎಸ್‌ಪಿಐಎಸ್/03, ದಿನಾಂಕ 28–01–2011

**ಪ್ರಸ್ತಾವನೆ :**

12ನೇ ಹಣಕಾಸು ಆಯೋಗದ ಅನುದಾನದಲ್ಲಿ ಬೆಂಗಳೂರು ನಗರ, ಮೈಸೂರು, ಉಡುಪಿ, ಗುಲ್ಬರ್ಗಾ, ಶಿವಮೊಗ್ಗ, ಧಾರವಾಡ, ಕೋಲಾರ, ದಕ್ಷಿಣ ಕನ್ನಡ, ಕೊಡಗು, ಮಂಡ್ಯ, ಹಾಸನ, ಬೀದರ್, ಚಿತ್ರದುರ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ನಿರ್ಮಿಸಲಾದ ಒಳಾಂಗಣ ಕ್ರೀಡಾಂಗಣಗಳ ನಿರ್ಮಾಣ ಕಾರ್ಯಗಳ 2010–11ನೇ ಸಾಲಿನ ಮೌಲ್ಯಮಾಪನವನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 20–12–2010ರ ಸರ್ಕಾರಿ ಆದೇಶದಲ್ಲಿ ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್, ಕೋರಮಂಗಲ, ಬೆಂಗಳೂರು, ಅವರಿಗೆ ವಹಿಸಲಾಯಿತು. ಮೌಲ್ಯಮಾಪನ ವಹಿಸಲ್ಪಟ್ಟ ಸಂಸ್ಥೆಯು ಮೇಲೆ (2)ರಲ್ಲಿ ಓದಲಾದ ದಿನಾಂಕ 28–01–2011ರ ಪತ್ರದಲ್ಲಿ ಮೌಲ್ಯಮಾಪನದ ಯೋಜನಾ ಪ್ರಸ್ತಾವನೆ, ಕಾಲಮಿತಿ, ಕಾರ್ಯ ವಿಧಾನ, ವೆಚ್ಚದ ವಿವರಗಳನ್ನು ಒದಗಿಸಿದೆ. ಸಂಸ್ಥೆಯಿಂದ ಒದಗಿಸಲ್ಪಟ್ಟ ಮೇಲ್ಕಂಡ ಯೋಜನಾ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 65 ಸಮನ 10, ಬೆಂಗಳೂರು, ದಿನಾಂಕ: 09–02–2011**

12ನೇ ಹಣಕಾಸು ಆಯೋಗದ ಅನುದಾನದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕೈಗೊಳ್ಳಲಾದ ಈಜುಕೊಳ ಮತ್ತು ಕ್ರೀಡಾಂಗಣ ನಿರ್ಮಾಣ ಕಾರ್ಯಕ್ರಮದ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯವನ್ನು ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್, ನಂ. 312, ಕಾವೇರಿ ಬ್ಲಾಕ್, ಎ–4, ನ್ಯಾಷನಲ್ ಗೇಮ್ಸ್ ಕಾಂಪ್ಲೆಕ್ಸ್, ಕೋರಮಂಗಲ, ಬೆಂಗಳೂರು–560 047, ಈ ಸಂಸ್ಥೆಯ ಮೂಲಕ ರೂ. 4,40,000/–ಗಳ ವೆಚ್ಚದಲ್ಲಿ ಕೈಗೊಳ್ಳಲು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್ ಸಂಸ್ಥೆಯು ಸಲ್ಲಿಸಿರುವ ಯೋಜನಾ ಪ್ರಸ್ತಾವನೆಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಸಂಬಂಧ ತಗಲುವ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2204–00–104–0–25–051 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈಗಾಗಲೇ ಆದೇಶಿಸಿರುವಂತೆ ಶ್ರೀ ವೈ. ಆರ್. ಕಾಂತರಾಜೇಂದ್ರ, ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು, ಇವರು ನೋಡೆಲ್ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಾರೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: 444 ಐಎಫ್ಎ 2011, ದಿನಾಂಕ 08–02–2011ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 422 ಯುವಜನ ಸೇವಾ ಇಲಾಖೆ

## ಇಂಧನ ಸಚಿವಾಲಯ

**ವಿಷಯ** : ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ವಲಯ ಕಛೇರಿಯ ಕಟ್ಟಡದ ಬಾಡಿಗೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಇಎನ್ 76 ಇಬಿಎಸ್ 2009, ದಿನಾಂಕ 22–08–2009

2) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/36369/2009–10, ದಿನಾಂಕ 22–02–2010.

3) ಲೋಕೋಪಯೋಗಿ ಇಲಾಖೆ, ಕಾರ್ಯನಿರ್ವಾಹಕ ಅಭಿಯಂತರರ ಪತ್ರ ದಿನಾಂಕ 01–07–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖೆ ಕಛೇರಿಗಳ ಪುನರ್ ವ್ಯವಸ್ಥೆ ಮತ್ತು ಕಾರ್ಯರೂಪಕ್ಕೆ ಬರುವ ಕಛೇರಿಗಳಿಗೆ ಸಿಬ್ಬಂದಿಗಳ ಹಂಚಿಕೆ/ಮರು ವಿನ್ಯಾಸ/ಸ್ಥಳ ಬದಲಾವಣೆ ಕುರಿತಂತೆ ಸರ್ಕಾರಿ ಆದೇಶ ಹೊರಡಿಸಲಾಗಿದೆ.

ಆ ಆದೇಶದನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಲಿ ಕಾರ್ಯನಿರ್ವಹಿಸುತ್ತಿರುವ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮತ್ತು ವಿದ್ಯುತ್ ಪರಿವೀಕ್ಷಕರ ಕಛೇರಿ ಹಾಗೂ ಉಪ ವಿದ್ಯುತ್ ಪರಿವೀಕ್ಷಕರ ಕಛೇರಿಗಳಿಗೆ ಕ್ರಮವಾಗಿ ಪ್ರತಿ ತಿಂಗಳಿಗೆ ರೂ. 7100/– ಮತ್ತು ರೂ. 6100/–ನ್ನು ಪ್ರತ್ಯೇಕವಾಗಿ ಪಾವತಿಸುವ ಆಧಾರದಲ್ಲಿ ಕಾರ್ಯನಿರ್ವಹಿಸಲಾಗುತ್ತಿತ್ತು. ಕಛೇರಿ ಪುನರ್‌ವಿಂಗಡನೆ ಯೋಜನೆಯಡಿಯಲ್ಲಿ ವಿದ್ಯುತ್ ಪರಿವೀಕ್ಷಕರು ಮತ್ತು ಉಪ ವಿದ್ಯುತ್ ಪರಿವೀಕ್ಷಕರ ಕಛೇರಿಗಳು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿಯಲ್ಲಿ ವಿಲೀನಗೊಂಡ ಪ್ರಯುಕ್ತ ಹಿಂದೆ ನೀಡಲಾಗುತ್ತಿದ್ದಂತೆ ಮಾಸಿಕ ಬಾಡಿಗೆ ರೂ. 13200/–ಗಳನ್ನು ಪಾವತಿಸಲು ವಿದ್ಯುತ್ ಪರಿವೀಕ್ಷಕರಿಗೆ ಆರ್ಥಿಕ ಪ್ರತ್ಯಾಯೋಜನೆಯಲ್ಲಿ ಅಧಿಕಾರ ಇಲ್ಲದಿರುವುದರಿಂದ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರೇ ಎರಡೂ ಕಛೇರಿಗಳ ಕಟ್ಟಡದ ಬಾಡಿಗೆಯನ್ನು ಪಾವತಿಸಬೇಕಾದ ಪ್ರಯುಕ್ತ ಹಾಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೋಳೂರು ಬಸವನಗೌಡರ ಸ್ವಾಧೀನದಲ್ಲಿರುವ 4ನೇ ಬ್ಲಾಕ್, ವಾರ್ಡ್ ನಂ. 18ರ 2ನೇ ಮುಖ್ಯ ರಸ್ತೆಯ ಪಾರ್ವತಿ ನಗರ, ಮನೆ ಸಂಖ್ಯೆ: 328 ರಲ್ಲಿ ಪ್ರತಿ ಚದರ ಅಡಿಗೆ 6.68ರ ದರದಲ್ಲಿ ಒಟ್ಟು 1974.87 ಚದರ ಅಡಿಗಳಿಗೆ (998.87+976=1974.87) ಹಿಂದೆ ನೀಡಲಾಗುತ್ತಿದ್ದ ಬಾಡಿಗೆ ರೂ. 13200/–ರಂತೆಯೇ ಮುಂದುವರೆಸಿಕೊಂಡು ಹೋಗಲು ಸರ್ಕಾರದ ಆದೇಶ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖಾ ವಿಭಾಗ, ಬಳ್ಳಾರಿ ರವರು ದಿನಾಂಕ 01–07–2008 ರಂದು ನೀಡಿರುವ ಬಾಡಿಗೆ ಪ್ರಮಾಣ ಪತ್ರದಲ್ಲಿ ವಿದ್ಯುತ್ ಪರಿವೀಕ್ಷಕರ ಕಛೇರಿ, ಬಳ್ಳಾರಿ ಇಲ್ಲಿಗೆ 976 ಚದರ ಅಡಿಗೆ ರೂ. 6100/–ರಂತೆ ಹಾಗೂ 998.87 ಚದರ ಅಡಿ ವಿಸ್ತೀರ್ಣ ಹೊಂದಿರುವ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿಗೆ ಪ್ರತಿ ತಿಂಗಳಿಗೆ ರೂ. 7100/–ರಂತೆ ನಿಗದಿಪಡಿಸಿ ಒಟ್ಟು ರೂ. 13200/–ಗಳಿಗೆ ಬಾಡಿಗೆ ಪ್ರಮಾಣ ಪತ್ರವನ್ನು ನೀಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 137 ಇಬಿಎಸ್ 2009, ಬೆಂಗಳೂರು, ದಿನಾಂಕ: 08–02–2011**

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಎರಡೂ ಕಛೇರಿಗಳ ಚದರ ಅಡಿಗಳಾದ 976+998.87 ವಿಸ್ತೀರ್ಣವುಳ್ಳ ಒಟ್ಟು 1974.87 ಚದರ ಅಡಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ ಮತ್ತು ವಿದ್ಯುತ್ ಪರಿವೀಕ್ಷಕರ ಕಛೇರಿ ಹಾಗೂ ಉಪ ವಿದ್ಯುತ್ ಪರಿವೀಕ್ಷಕರ ಕಛೇರಿಗೆ ಪಾವತಿಸಬೇಕಾದ ಮಾಸಿಕ ಬಾಡಿಗೆಯಾದ ಒಟ್ಟು ರೂ. 13200/–ಗಳನ್ನು ಪಾವತಿಸಲು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ವಲಯ ಕಛೇರಿ ಇವರಿಗೆ ಅನುಮತಿಸಿ ಆದೇಶ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10–07–1996ರನ್ವಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ**

ಪಿ.ಆರ್. ನಂ. 423 ಪೀಠಾಧಿಕಾರಿ, ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ** : ವಿದ್ಯುತ್ ಪರಿವೀಕ್ಷಣಾ ಇಲಾಖೆ, ಕೇಂದ್ರ ಕಛೇರಿಯಲ್ಲಿ ಕಛೇರಿಯ ಉಪಯೋಗಕ್ಕಾಗಿ ಒಂದು ವಾಹನ ಬಾಡಿಗೆ ಆಧಾರದ ಮೇಲೆ ಪಡೆದು ಪೂಲ್ ವೆಹಿಕಲ್ ಆಗಿ ಬಳಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** : 1) ಮುವಿಪ ರವರ ಪತ್ರ ಸಂಖ್ಯೆ: ಮುವಿಪ/ವಿಪ–3/ಸವಿಪ–3/23872–2010–11, ದಿನಾಂಕ 28–10–2010.

2) ಡಿಪಿಎಆರ್ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 1, ಜೆಎಸಿ 88, ದಿನಾಂಕ 05–07–1990

3) ಸಿಆಸುಇ ಆದೇಶ ಸಂಖ್ಯೆ: ಸಿಆಸುಇ 139 ಶಿವಾನಿ 2004, ದಿನಾಂಕ 11–09–2006

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಕೇಂದ್ರ ಕಛೇರಿಯಲ್ಲಿ ದೈನಂದಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಇಲಾಖಾ ಮುಖ್ಯಸ್ಥರ ಕಛೇರಿಗೆ ಸಾಮೂಹಿಕ ಬಳಕೆಗಾಗಿ ಒಂದು ವಾಹನ (ಪೂಲ್ ವೆಹಿಕಲ್)ವನ್ನು ಬಾಡಿಗೆ ಆಧಾರದ ಮೇಲೆ ಪಡೆಯಲು ಸರ್ಕಾರದ ಅನುಮತಿ ಕೋರಿರುತ್ತಾರೆ.

ಮೇಲೆ ಕ್ರಮಾಂಕ (2)ರ ಅಧಿಕೃತ ಜ್ಞಾಪನದಲ್ಲಿ ಪ್ರತಿಯೊಂದು ಇಲಾಖೆಯ ಮುಖ್ಯಸ್ಥರ ಕಛೇರಿಗೆ ಸಾಮೂಹಿಕ ಬಳಕೆಗಾಗಿ ಒಂದು ಸರ್ಕಾರಿ ವಾಹನವನ್ನು ಒದಗಿಸಿ ಆ ವಾಹನವು ಇಲಾಖಾ ಮುಖ್ಯಸ್ಥರ ಅಥವಾ ನಾಮನಿರ್ದಿಷ್ಟ ಅಧಿಕಾರಿಯ ನಿಯಂತ್ರಣಕ್ಕೆ ಒಳಪಡತಕ್ಕದ್ದು ಎಂದು ತಿಳಿಸಲಾಗಿದೆ.

ಮೇಲೆ ಓದಲಾದ (3)ರ ಆದೇಶದಲ್ಲಿ ಖಾಸಗಿ ವಾಹನಗಳನ್ನು ಬಾಡಿಗೆಗೆ ಪಡೆಯಲು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 278 ಶಿವಾನಿ 2000 ದಿನಾಂಕ 18-03-2002ರಲ್ಲಿ ನಮೂದಿಸಲಾಗಿದ್ದ ಬಾಡಿಗೆ ದರಗಳನ್ನು ಹಾಗೂ ಕಾಲಮಿತಿಯನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ. ವಿಧಿಸಲಾಗಿರುವ ಷರತ್ತುಗಳನ್ನು ಅಳವಡಿಸಿಕೊಂಡು ಮುಖ್ಯ ವಿದ್ಯುತ್ ಪರಿವೀಕ್ಷಕರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2010, ದಿನಾಂಕ: 09-02-2011**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿಗೆ, ಕಛೇರಿಯ ದೈನಂದಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸಿಆಸುಇ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 17 ಜೆಎಸಿ 88 ದಿನಾಂಕ 05-07-1990 ರಲ್ಲಿನ ಸೂಚನೆ ಮೇರೆಗೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 139 ಶಿವಾನಿ 2004, ದಿನಾಂಕ 11-09-2006ರಲ್ಲಿ ವಿಧಿಸಿರುವ ಷರತ್ತುಗಳನ್ವಯ ಬಾಡಿಗೆ ಆಧಾರದಲ್ಲಿ ಒಂದು ವಾಹನವನ್ನು ಪಡೆಯಲು ಅನುಮತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ 10-07-1996 ರಂತೆ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ**

ಪಿ.ಆರ್. ನಂ. 424 ಪೀಠಾಧಿಕಾರಿ, ಇಂಧನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 19-1-2009
2) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008 [1], ದಿನಾಂಕ 4-2-2009
3) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008 [2], ದಿನಾಂಕ 4-2-2009
4) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 30-3-2009
5) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 20-10-2009
6) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 29-10-2009
7) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 11-02-2010
8) ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ದಿನಾಂಕ 17-09-2010
9) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 22-06-2009
10) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 26-09-2009
11) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 24-10-2009
12) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 14-06-2010
13) ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 39 ಅಜವಿ 2008, ದಿನಾಂಕ 20-09-2010
14) ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಹಾಗೂ ಅಧ್ಯಕ್ಷರು, ಬಿಪಿಓ ಸ್ಕ್ರೀನಿಂಗ್ ಕಮಿಟಿ ಇವರ ಪತ್ರದ ಸಂಖ್ಯೆ: ಕೆಬಿಟ್ಸ್/ಪಿಇ/ ಗ್ರಾಬಿಪಿಓಕೇಂದ್ರ/66/2010-11, ದಿನಾಂಕ 18-01-2011.

**ಪ್ರಸ್ತಾವನೆ :**

ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಗೆ 2008-09ನೇ ಸಾಲಿನಿಂದ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿಯ ನಮೂನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ [3]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಂಬಂಧದ ಅರ್ಜಿಗಳನ್ನು ಪರಿಶೀಲಿಸಿ, ಸರ್ಕಾರಕ್ಕೆ ಅರ್ಹ ಅರ್ಜಿಗಳನ್ನು ಶಿಫಾರಸ್ಸು ಮಾಡುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸ್ಕ್ರೀನಿಂಗ್ ಕಮಿಟಿಯನ್ನು ರಚಿಸಲಾಗಿದೆ.

ಮೇಲೆ (4)ರಿಂದ (8)ರಲ್ಲಿ ಓದಲಾದ ಆದೇಶಗಳಲ್ಲಿ 2008-09ನೇ ಸಾಲಿನಿಂದ ಇಲ್ಲಿಯವರೆಗೆ ರೂ. 520.00 ಲಕ್ಷಗಳನ್ನು ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಈಗಾಗಲೇ ಬಿಡುಗಡೆ ಮಾಡಿದೆ.

ಮೇಲೆ (9)ರಿಂದ (12)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009-10ನೇ ಸಾಲಿನಿಂದ ಇಲ್ಲಿಯವರೆಗೆ ಸಾಲಿನಲ್ಲಿ 32 ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ [13]ರಲ್ಲಿ ಓದಲಾದ ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರದಲ್ಲಿ ಸರ್ಕಾರದ ಮಾರ್ಗಸೂಚಿಯನ್ವಯ ಕೆಬಿಟ್ಸ್ ಸಂಸ್ಥೆಯವರು ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ 25-10-2010ರೊಳಗೆ 83 ಅರ್ಜಿಗಳನ್ನು

ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ಸರ್ಕಾರಿ ಆದೇಶ ದಿನಾಂಕ 4-2-2009ರಲ್ಲಿ ರಚಿಸಲಾದ ಸ್ಕ್ರೀನಿಂಗ್ ಕಮಿಟಿಯು ಸರ್ಕಾರದ ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ ಅರ್ಹರಾದ 21 ಅರ್ಜಿದಾರರನ್ನು ವೈಯಕ್ತಿಕ ಸಂದರ್ಶನ ನಡೆಸಿ, ಈ ಕೆಳಕಂಡ 6 ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಶಿಫಾರಸ್ಸು ಮಾಡಿ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ. ಸಂ. | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಹಾಗೂ ವಿಳಾಸ | ಬಿಪಿಓ ಕೇಂದ್ರ ತೆರೆಯಲು ಅನುಮೋದಿಸಿರುವ ಸ್ಥಳ |
|---|---|---|
| 01 | ಶ್ರೀ ಮಲ್ಲಿಕಾರ್ಜುನ, ಎಸ್. ಲೋಣಿ ಲಿಂಗದ ಗುಡಿ ಹತ್ತಿರ, ಚಾಲುಕ್ಯ ನಗರ, ಬಿಜಾಪುರ-586101 | ಬಾರಟಗಿ ಎಲ್.ಟಿ. ನಂ. 1, ಎದುರು, ಅರಕೇರಿ ವಿಲೇಜ್, ಬಿಜಾಪುರ (ತಾ+ಜಿಲ್ಲೆ) |
| 02 | ಶ್ರೀ ಉಮೇಶ್ ಬೆಲ್ಲುಡಿ, ಸಿಇಓ & ಎಮ್.ಡಿ. ಮೆ॥ ಬ್ರೈನ್‌ಟ್ರೀ ಹೆಚ್. ಆರ್. ಕನ್ಸಲ್ಟಿಂಗ್ ಪ್ರೈ. ಲಿಮಿಟೆಡ್, ನಂ. 19, ಶಿವಶಂಕರ್ ಪ್ಲಾಜ, ಐದನೇ ಮಹಡಿ, ರಿಚ್‌ಮಂಡ್ ಸರ್ಕಲ್, ಬೆಂಗಳೂರು-560027 | ಶಿರಮಗೊಂಡನಹಳ್ಳಿ ಪೋಸ್ಟ್, ದಾವಣಗೆರೆ ಜಿಲ್ಲೆ |
| 03 | ಶ್ರೀ ವೀರಪ್ಪ ಹೊಳಬಸಪ್ಪ ಅರಕೇರಿ, ಡೈರೆಕ್ಟರ್, ಮೆ॥ ಡಿಜಿ ಸ್ಕ್ರೈಬ್, ಕಂಚಗಾರ ಸ್ಟ್ರೀಟ್, ಹುಬ್ಬಳ್ಳಿ-580 028 | ಗುಡುಗೇರಿ, ಕುಂದಗೋಳ, ತಾ. ಧಾರವಾಡ ಜಿಲ್ಲೆ |
| 04 | ಶ್ರೀ ಡಿ. ಕೆ. ಸುರೇಶ್ ಕುಮಾರ್, ನಂ. 5/77, ಶನಿವಾರಸಂತೆ-571235, ಸೋಮವಾರಪೇಟೆ, ತಾ. ಕೊಡಗು (ಉತ್ತರ) | ಸೋಮವಾರಪೇಟೆ, ಕೊಡಗು ಜಿಲ್ಲೆ, (ಉತ್ತರ) |
| 05 | ಶ್ರೀ ಜಂಬೂನಾಥ್ ಸ್ವಾಮಿ, ಎಸ್. ಮಳಿಮಠ (ಪಾಲುದಾರ) ಮೆ॥ ಸಿದ್ದೇಶ್ವರ ಸಲ್ಯೂಷನ್, ಶ್ರೀ ಮರುಳ ಸಿದ್ದೇಶ್ವರ ಆಶ್ರಮ, ಗೊರೆಬಾಳ॥ ಪೋಸ್ಟ್, ಸಿಂದನೂರು ತಾ॥ ರಾಯಚೂರು ಜಿಲ್ಲೆ | ಗೊರೆಬಾಳ, ಸಿಂಧನೂರು ತಾ॥ ರಾಯಚೂರು ಜಿಲ್ಲೆ |
| 06 | ಮೆ॥ ಅಮೋಘ್ ಇನ್‌ಫೋಟೆಕ್, ನಂ. 2, ಕೆ.ಎಚ್.ಬಿ. ಕಾಲೋನಿ, ಕನಕಪುರ, ರಾಮನಗರ ಜಿಲ್ಲೆ | ಕನಕಪುರ, ರಾಮನಗರ ಜಿಲ್ಲೆ |

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮೇಲಿನ ಆರು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ಬೆಂಗಳೂರು ದಿನಾಂಕ: 10-02-2011**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2010-11ನೇ ಸಾಲಿನಲ್ಲಿ ಅನುಬಂಧ 'ಅ' ರಲ್ಲಿ ವಿವರಿಸಿರುವ ಆರು ಅರ್ಹ ಅಭ್ಯರ್ಥಿಗಳು ಗ್ರಾಮೀಣ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸಲು ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಕೆಬಿಟ್ಸ್ ಸಂಸ್ಥೆಯವರು ಮೇಲೆ [1] ಮತ್ತು [2]ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಹಾಗೂ ಮಾರ್ಗಸೂಚಿಯಂತೆ ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಪ್ರಗತಿಗೆ ಅನುಗುಣವಾಗಿ ಕಾಲಕಾಲಕ್ಕೆ ಹಂತಹಂತವಾಗಿ ಹಣ ಬಿಡುಗಡೆ ಮಾಡತಕ್ಕದ್ದು.
2. ಗ್ರಾಮೀಣ ಬಿಪಿಓ ಕಾರ್ಯವೈಖರಿಯನ್ನು ಆಗಿಂದಾಗ್ಗೆ ತಪಾಸಣೆ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು
3. ಬಿಪಿಓ ಕೇಂದ್ರಗಳಿಂದ ವಿನಿಯೋಗಿತ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಕಾಲದಲ್ಲಿ ಸಲ್ಲಿಸತಕ್ಕದ್ದು
4. ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಬಿಡುಗಡೆ ಮಾಡುವ ಹಣ ದುರುಪಯೋಗವಾಗದಂತೆ ಹಾಗೂ ಯೋಜನೆಯ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ವಸೂಲಿ ಮಾಡುವ ಬಗ್ಗೆ/ಮೂಲಭೂತ ಸೌಕರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ವಿಧಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಅನುಬಂಧ-ಅ

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ಬೆಂಗಳೂರು ದಿನಾಂಕ: 03-02-2011**

| ಕ್ರ. ಸಂ. | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಹಾಗೂ ವಿಳಾಸ | ಬಿಪಿಓ ಕೇಂದ್ರ ತೆರೆಯಲು ಅನುಮೋದಿಸಿರುವ ಸ್ಥಳ |
|---|---|---|
| 01 | ಶ್ರೀ ಮಲ್ಲಿಕಾರ್ಜುನ, ಎಸ್. ಲೋಣಿ, ಲಿಂಗದ ಗುಡಿ ಹತ್ತಿರ, ಚಾಲುಕ್ಯ ನಗರ, ಬಿಜಾಪುರ-586101 | ಬಾರಟಗಿ ಎಲ್.ಟಿ. ನಂ. 1, ಎದುರು, ಅರಕೇರಿ ವಿಲೇಜ್, ಬಿಜಾಪುರ (ತಾ+ಜಿಲ್ಲೆ) |
| 02 | ಶ್ರೀ ಉಮೇಶ್ ಬೆಲ್ಲುಡಿ, ಸಿಇಓ & ಎಮ್.ಡಿ. ಮೆ॥ ಬ್ರೈನ್‌ಟ್ರೀ ಹೆಚ್. ಆರ್. ಕನ್ಸಲ್ಟಿಂಗ್ ಪ್ರೈ. ಲಿಮಿಟೆಡ್, ನಂ. 19, ಶಿವಶಂಕರ್ ಪ್ಲಾಜ, ಐದನೇ ಮಹಡಿ, ರಿಚ್‌ಮಂಡ್ ಸರ್ಕಲ್, ಬೆಂಗಳೂರು-560027 | ಶಿರಮಗೊಂಡನಹಳ್ಳಿ ಪೋಸ್ಟ್, ದಾವಣಗೆರೆ ಜಿಲ್ಲೆ |
| 03 | ಶ್ರೀ ವೀರಪ್ಪ ಹೊಳಬಸಪ್ಪ ಅರಕೇರಿ, ಡೈರೆಕ್ಟರ್, ಮೆ॥ ಡಿಜಿ ಸ್ಕ್ರೈಬ್, ಕಂಚಗಾರ ಸ್ಟ್ರೀಟ್, ಹುಬ್ಬಳ್ಳಿ-580 028 | ಗುಡುಗೇರಿ, ಕುಂದಗೋಳ, ತಾ. ಧಾರವಾಡ ಜಿಲ್ಲೆ |

| | | |
|---|---|---|
| 04 | ಶ್ರೀ ಡಿ. ಕೆ. ಸುರೇಶ್ ಕುಮಾರ್, ನಂ. 5/77, ಶನಿವಾರಸಂತೆ–571235, ಸೋಮವಾರಪೇಟೆ, ತಾ. ಕೊಡಗು (ಉತ್ತರ) | ಸೋಮವಾರಪೇಟೆ, ಕೊಡಗು ಜಿಲ್ಲೆ, (ಉತ್ತರ) |
| 05 | ಶ್ರೀ ಜಂಬೂನಾಥ್ ಸ್ವಾಮಿ, ಎಸ್. ಮಳಿಮಠ (ಪಾಲುದಾರ) ಮೆ॥ ಸಿದ್ದೇಶ್ವರ ಸಲ್ಯೂಷನ್, ಶ್ರೀ ಮರುಳ ಸಿದ್ದೇಶ್ವರ ಆಶ್ರಮ, ಗೊರೆಬಾಳ॥ ಪೋಸ್ಟ್, ಸಿಂದನೂರು ತಾ॥ ರಾಯಚೂರು ಜಿಲ್ಲೆ | ಗೊರೆಬಾಳ, ಸಿಂಧನೂರು ತಾ॥ ರಾಯಚೂರು ಜಿಲ್ಲೆ |
| 06 | ಮೆ॥ ಅಮೋಘ್ ಇನ್‌ಫೋಟೆಕ್, ನಂ. 2, ಕೆ.ಎಚ್.ಬಿ. ಕಾಲೋನಿ, ಕನಕಪುರ, ರಾಮನಗರ ಜಿಲ್ಲೆ | ಕನಕಪುರ, ರಾಮನಗರ ಜಿಲ್ಲೆ |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. ನಂ. 425

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub :-** Proposal of IIITB Bangalore for financial support for expansion of current campus in Bangalore.

**Read :-**
1. Govt. Order No. ITD 30 MDA 2009, dated 18-01-2010
2. Govt. Order No. ITD 30 MDA 2009, dated 22-06-2010
3. Govt. Order No. ITD 30 MDA 2009, dated 30-12-2010
4. Letter dated 29-11-2010 of the Directorate of Information Technology & Bio Technology Department and the letter dated 03-11-2010 of the Registrar, IIITB, Bangalore.

**Preamble:-**

The International Institute of Information Technology, Bangalore during 2009-10, has submitted a proposal for expansion of their current campus at Electronics City, Bangalore at an estimated cost of Rs. 11.43 crores vide their letter dated 1-10-2009. Whereas, Finance Department vide their Note No. FD 304 Exp-2/09, dated 21-12-2009 agreed to provide Rs. 6.00 crores over two years, for the said project and to provide Rs. 300 lakhs for 2009-10 in Supplementary Estimate-II under the Head of Account "3451-00-090-2-05-101 [Plan]"

Accordingly, in the Government Order read at [1] above, Government had accorded approval for release of Rs. 300 lakhs to the Director, International Institute of Information Technology, Bangalore [IIITB] for expansion of their current campus at Electronics City in Bangalore.

In the Government Order read at (2) above, Government have accorded approval for release of Rs. 100 lakhs to the Director, International Institute of Information Technology, Bangalore [IIITB] for expansion of their current campus at Electronics City in Bangalore provided in the 2010-11 Budget.

In the Government Order read at (3) above, Government have accorded approval for release of Rs.100 lakhs to the Director, International Institute of Information Technology, Bangalore [IIITB] for expansion of their current campus at Electronics City in Bangalore provided in the 2010-11 Budget.

The Registrar, IIITB, Bangalore vide his letter dated 03-11-2010 read at (3) above, has requested to release the balance amount Rs. 200 lakhs, that has been provided in the 2010-11 Budget.

The request of the Registrar, IIITB, Bangalore has been examined and it is considered to release Rs. 100 lakhs in December 2010, and Rs. 100 lakhs in February 2011 to the Director IIITB, for expansion of their current campus at Electronics City, Bangalore out Rs. 300 lakhs provided under the Head of Account "3451-00-090-2-05-101" [Plan] as per the delegated powers to Principal Secretary. Hence the Order.

**Government Order No. ITD 30 MDA 2009, Bangalore, Dated 09-02-2011**

In the circumstances explained in the preamble, Government are pleased to accord approval for release of Rs. 100 lakhs [Rupees One hundred lakhs only] to the Director, International Institute of Information Technology, Bangalore [IIITB] for expansion of their current campus at Electronics City in Bangalore out of Rs. 300 lakhs provided in the 2010-11 Budget.

The expenditure on this account shall be met, out of the grants provided under the Head of account "3451-00-090-2-05-101 [Plan]" for the year 2010-11.

The administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Biotechnology and disburse the amount.

The Director, International Institute of Information Technology, Bangalore [IIITB] shall submit the Utilization Certificate in the prescribed format through the Director, Information Technology and Biotechnology, Bangalore.

This Order issues with the concurrence of Finance Department vide their note No. FD 460 EXP-2/10, dated 23-12-2010.

By Order and in the name of the Governor of Karnataka
**K. Boralingaiah**
Under Secretary to Government
Information Technology, Biotechnology
and Science and Technology Department

PR. No. 426

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಶ್ರೀ ಕೆ. ಎಂ. ಸಡಗೋಪನ್, ನೋಟರಿ, ಬೆಂಗಳೂರು (ನಗರ) ಇವರ ಕರ್ತವ್ಯ ಲೋಪದ ದೂರು ಬಗ್ಗೆ ಶಿಸ್ತು ಕ್ರಮ.

**ಓದಲಾಗಿದೆ** : 1) ಶ್ರೀಮತಿ ಹಬೀಬುನ್ನೀಸ, ಬೆಂಗಳೂರು ಇವರಿಂದ ಸ್ವೀಕೃತವಾದ ದೂರು ಮನವಿ ದಿನಾಂಕ 23–02–2007.

2) ಸರ್ಕಾರಿ ಆದೇಶ ಸಂಖ್ಯೆ: ಲಾ 72 ಎಲ್‌ಸಿಎಲ್ 2007, ದಿನಾಂಕ 30–03–2007, 13–02–08, 09–06–08 ಹಾಗೂ ಅರೆ ಸರ್ಕಾರಿ ಪತ್ರ ಸಂಖ್ಯೆ: ಲಾ 72 ಎಲ್‌ಸಿಎಲ್ 2007 ದಿನಾಂಕ 16–03–2009, 19–05–2009 ಮತ್ತು 11–03–2010.

3) ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಡಿಎಂ–I/ಬಿ/293/2010, ದಿನಾಂಕ 28–10–2010

**ಪ್ರಸ್ತಾವನೆ :**

ಶ್ರೀಮತಿ ಹಬೀಬುನ್ನೀಸ, ಬೆಂಗಳೂರು ಇವರು ಉಲ್ಲೇಖಿತ (1) ದಿನಾಂಕ 23–02–2007ರ ಮನವಿಯಲ್ಲಿ ಶ್ರೀ ಕೆ. ಎಂ. ಸಡಗೋಪನ್, ನೋಟರಿ, ಬೆಂಗಳೂರು (ನಗರ) ಇವರು ಸುಳ್ಳು ಶಪಥ ಪತ್ರಗಳನ್ನು ಪ್ರಮಾಣೀಕರಿಸಿ ಸರ್ಕಾರ ಹಾಗೂ ಸಾರ್ವಜನಿಕರಿಗೆ ಮೋಸ ಮಾಡುತ್ತಿದ್ದಾರೆ ಎಂದು ಸಲ್ಲಿಸಲಾಗಿದ್ದ ದೂರು ಮನವಿ ಬಗ್ಗೆ ಉಲ್ಲೇಖಿತ (2) ದಿನಾಂಕ 30–03–2007 ಹಾಗೂ ನಂತರದ ಸರ್ಕಾರದ ಪತ್ರಗಳಲ್ಲಿ ನೋಟರಿಯವರಿಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಹಾಗೂ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೂ ದೂರು ಮನವಿಯನ್ನು ಕಳುಹಿಸಿ ನೋಟರಿ ಅವರಿಂದ ಲಿಖಿತ ಹೇಳಿಕೆ ಪಡೆದು ಆ ಬಗ್ಗೆ ಸ್ಪಷ್ಟ ಅಭಿಪ್ರಾಯ/ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಅದರಂತೆ, ನೋಟರಿಯವರು ದಿನಾಂಕ 08–06–2007 ರಂದು ಸಕ್ಷಮ ಪ್ರಾಧಿಕಾರ ಹಾಗೂ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರಿಗೆ ಹಾಗೂ ಸರ್ಕಾರಕ್ಕೆ ಲಿಖಿತ ಉತ್ತರ ನೀಡಿದ್ದರು. ಆ ಬಗ್ಗೆ ವಿಚಾರಣಾ ವರದಿಯನ್ನು ಉಲ್ಲೇಖಿತ (3)ರ ಪತ್ರ ದಿನಾಂಕ 28–10–2010ರೊಂದಿಗೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಸಲ್ಲಿಸಿದ್ದು ಅದರಲ್ಲಿ ನೋಟರಿಯವರು ದೂರನ್ನು ಅಲ್ಲಗಳೆದಿದ್ದಾರೆ, ದೂರುದಾರರಿಗೂ, ಪ್ರಮಾಣೀಕರಿಸಲಾಗಿದೆ ಎಂಬ Deed of revocationಗೂ ಯಾವುದೇ ಸಂಬಂಧವಿರುವುದಿಲ್ಲ ಮತ್ತು ಪ್ರಮಾಣೀಕರಿಸಿದ ದಾಖಲೆಗಳ ಬಗ್ಗೆ ರಿಜಿಸ್ಟರ್‌ನಲ್ಲಿ ನಮೂದಿಸಿಕೊಳ್ಳದೆ ಯಾವುದೇ ಕರ್ತವ್ಯ ಮಾಡುವುದಿಲ್ಲ ಎಂಬುದು ನೋಟರಿಯವರ ವಿವರಣೆ ಹಾಗೂ ದುರುದ್ದೇಶಪೂರಕ ದೂರು ಬಗ್ಗೆ ನೋಟರಿಯವರು ದೂರುದಾರರ ಮೇಲೆ ಯಾವುದೇ ಕ್ರಮ ತೆಗೆದು ಕೊಳ್ಳಲು ಸ್ವತಂತ್ರರಾಗಿರುತ್ತಾರೆ, ಆದಾಗ್ಯೂ "respondent Notary is not Quilty of acts alleged against him" ಎಂದು ತಿಳಿಸಿದ್ದಾರೆ.

ಸರ್ಕಾರವು ವಿಚಾರಣಾ ವರದಿ, ನೋಟರಿಯವರ ಹೇಳಿಕೆಯನ್ನು ಪರಿಗಣಿಸಿ, ನೋಟರಿಯವರು ಈಗಾಗಲೇ ಸುಮಾರು ಮೂರುವರೆ ವರ್ಷಗಳಿಂದ ನೋಟರಿ ಕರ್ತವ್ಯ ನಿರ್ವಹಿಸದೇ ದಂಡನೆಯನ್ನು ಅನುಭವಿಸಿರುವುದರಿಂದ ಇವರ ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 72 ಎಲ್‌ಸಿಎಲ್ 2007, ಬೆಂಗಳೂರು ದಿನಾಂಕ: 09–02–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕೆ. ಎಂ. ಸಡಗೋಪನ್, ನೋಟರಿ, ಬೆಂಗಳೂರು (ನಗರ) ಇವರ ಮೇಲಿನ ದೂರು ಸಾಬೀತಾಗದೇ ಇರುವುದರಿಂದ ಇವರ ಮೇಲಿನ ಪ್ರಕರಣವನ್ನು ಮುಕ್ತಾಯಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾ. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. ನಂ. 427

## ಒಳಾಡಳಿತ ಸಚಿವಾಲಯ

**ವಿಷಯ :** ವಾರ್ಡರ್ ಹುದ್ದೆಗೆ ನೇಮಕಾತಿ ಮಾಡಲು – ಇಲಾಖಾ ನೇಮಕಾತಿ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 92 ಪಿಆರ್‌ಇ 2008, ದಿನಾಂಕ : 03–08–2009.

**2.** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಇ4/ಸಿಆರ್–23/2009, ದಿನಾಂಕ : 06–12–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಇಲಾಖಾ ನೇಮಕಾತಿ ಸಮಿತಿಯನ್ನು ರಚಿಸಲಾಗಿತ್ತು :–

1. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು. – ಅಧ್ಯಕ್ಷರು

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 463 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ಹುಲಿ ಸಂರಕ್ಷಣಾ ಚಾಲನಾ ಸಮಿತಿ, ಇವರ ಮುಖಂಡತ್ವದಲ್ಲಿ ಒಂದು ಅಧಿಕಾರಸ್ಥರ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ** : ಪ್ರಧಾನ ಮುಖ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರ ಪತ್ರ ಸಂಖ್ಯೆ: ಬಿ2(ಸಿ1) ಸಿಡಬ್ಲ್ಯುಎಲ್.ಸಿ.ಆರ್.–13/10–11, ದಿನಾಂಕ 15–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 15–11–2010ರ ಪತ್ರದಲ್ಲಿ ಪ್ರಧಾನ ಮುಖ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರು ದಿನಾಂಕ 11–08–2010ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಹುಲಿ ಸಂರಕ್ಷಣಾ ಚಾಲನಾ ಸಮಿತಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಹುಲಿ ಸಂರಕ್ಷಣಾ ಚಾಲನಾ ಸಮಿತಿಗೆ ಬರುವ ಪ್ರಸ್ತಾವನೆಗಳ ಬಗ್ಗೆ ಅಧ್ಯಯನ ನಡೆಸಿ ಪರಾಂಬರಿಸಿ ಹಾಗೂ ಚಾಲನಾ ಸಮಿತಿಯು ವಹಿಸುವ ಇತರೆ ಕಾರ್ಯಗಳನ್ನು ನಿರ್ವಹಿಸಲು ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ಹುಲಿ ಸಂರಕ್ಷಣಾ ಚಾಲನಾ ಸಮಿತಿ ಇವರ ಮುಖಂಡತ್ವದಲ್ಲಿ ಒಂದು ಅಧಿಕಾರಸ್ಥರ (Empowered Committee) ಉಪ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲು ಕೋರಿರುತ್ತಾರೆ.

| | | | |
|---|---|---|---|
| 1. | ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ | – | ಅಧ್ಯಕ್ಷರು |
| 2. | ಹುಲಿ ಸಂರಕ್ಷಣಾ ಪ್ರದೇಶಗಳ ಎಲ್ಲಾ ನಾಲ್ಕು ಕ್ಷೇತ್ರ ನಿರ್ದೇಶಕರುಗಳು | – | ಸದಸ್ಯರು |
| 3. | ಡಾ॥ ಕೆ. ಉಲ್ಲಾಸ್ ಕಾರಂತ್ | – | ಸದಸ್ಯರು |
| 4. | ಶ್ರೀ ಸಂಜಯ್ ಗುಬ್ಬಿ, ತುಮಕೂರು | – | ಸದಸ್ಯರು |
| 5. | ಅಪರ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಬೆಂಗಳೂರು | – | ಸದಸ್ಯ–ಕಾರ್ಯದರ್ಶಿ |

ಅಲ್ಲದೆ, ಹುಲಿ ಸಂರಕ್ಷಣಾ ಚಾಲನಾ ಸಮಿತಿ ಸಭೆಯಲ್ಲಿ ಚರ್ಚಿಸುವ ವಿಷಯಕ್ಕೆ ಸಂಬಂಧಿಸಿದಂತೆ, ಆಯಾ ಪ್ರದೇಶದ ಹುಲಿ ಸಂರಕ್ಷಣಾ ಚಾಲನಾ ಸಮಿತಿಯ ಸ್ಥಳೀಯ ಸದಸ್ಯರು ಕೂಡ ಇಂತಹ ಸಭೆಗೆ ವಿಶೇಷ ಆಹ್ವಾನಿತರಾಗಿ ಸಭೆಯ ಸಹ ಸದಸ್ಯರಾಗಿರುತ್ತಾರೆಂದು ಹಾಗೂ ಸಭೆಯು ವಿಷಯಗಳ ಮೇಲೆ ವಿವರವಾಗಿ ಚರ್ಚಿಸಿ ಉಪ ಸಮಿತಿಯ ತೀರ್ಮಾನವನ್ನು ರಾಜ್ಯ ವನ್ಯಜೀವಿ ಮಂಡಳಿಯ ಅಧ್ಯಕ್ಷರಾದ ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತಂದು ಜರೂರಾಗಿ ತೀರ್ಮಾನ ತೆಗೆದುಕೊಳ್ಳಲು ಇದರಿಂದ ಸಹಾಯಕವಾಗುತ್ತದೆಂದು ತಿಳಿಸಿ ಮೇಲ್ಕಂಡ ಅಧಿಕಾರಸ್ಥರ ಉಪ ಸಮಿತಿಯನ್ನು ರಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 262 ಎಫ್‌ಡಬ್ಲ್ಯೂಎಲ್ 2010, ಬೆಂಗಳೂರು, ದಿನಾಂಕ: 09–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ 11–08–2010ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಹುಲಿ ಸಂರಕ್ಷಣಾ ಚಾಲನಾ ಸಮಿತಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಹುಲಿ ಸಂರಕ್ಷಣಾ ಚಾಲನಾ ಸಮಿತಿಗೆ ಬರುವ ಪ್ರಸ್ತಾವನೆಗಳ ಬಗ್ಗೆ ಅಧ್ಯಯನ ನಡೆಸಿ ಪರಾಂಬರಿಸಿ ಹಾಗೂ ಚಾಲನಾ ಸಮಿತಿಯು ವಹಿಸುವ ಇತರೆ ಕಾರ್ಯಗಳನ್ನು ನಿರ್ವಹಿಸಲು ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ಅಧಿಕಾರಸ್ಥರ (Empowered Committee) ಸಮಿತಿಯನ್ನು ರಚಿಸಿದೆ.

| | | | |
|---|---|---|---|
| 1. | ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ | – | ಅಧ್ಯಕ್ಷರು |
| 2. | ಹುಲಿ ಸಂರಕ್ಷಣಾ ಪ್ರದೇಶಗಳ ಎಲ್ಲಾ ನಾಲ್ಕು ಕ್ಷೇತ್ರ ನಿರ್ದೇಶಕರುಗಳು | – | ಸದಸ್ಯರು |
| 3. | ಡಾ॥ ಕೆ. ಉಲ್ಲಾಸ್ ಕಾರಂತ್<br>ನಿರ್ದೇಶಕರು, ಸೆಂಟರ್ ಫಾರ್ ವೈಲ್ಡ್‌ಲೈಫ್ ಸ್ಟಡೀಸ್,<br>ನಂ. 1669, 31ನೇ ಕ್ರಾಸ್, 16ನೇ ಮೇನ್, ಬನಶಂಕರಿ,<br>2ನೇ ಹಂತ, ಬೆಂಗಳೂರು–560 070. | – | ಸದಸ್ಯರು |
| 4. | ಶ್ರೀ ಸಂಜಯ್ ಗುಬ್ಬಿ,<br>ಸಂ. 2208/ಬಿ, ಸಾಧನಾ ರಸ್ತೆ, ಕೆ. ಆರ್. ಬಡಾವಣೆ, ತುಮಕೂರು | – | ಸದಸ್ಯರು |
| 5. | ಅಪರ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಬೆಂಗಳೂರು | – | ಸದಸ್ಯ–ಕಾರ್ಯದರ್ಶಿ |

ಅಲ್ಲದೆ, ಹುಲಿ ಸಂರಕ್ಷಣಾ ಚಾಲನಾ ಸಮಿತಿ ಸಭೆಯಲ್ಲಿ ಚರ್ಚಿಸುವ ವಿಷಯಕ್ಕೆ ಸಂಬಂಧಿಸಿದಂತೆ, ಆಯಾ ಪ್ರದೇಶದ ಹುಲಿ ಸಂರಕ್ಷಣಾ ಚಾಲನಾ ಸಮಿತಿಯ ಸ್ಥಳೀಯ ಸದಸ್ಯರು ಕೂಡ ಇಂತಹ ಸಭೆಗೆ ವಿಶೇಷ ಆಹ್ವಾನಿತರಾಗಿ ಸಭೆಯ ಸಹ ಸದಸ್ಯರಾಗಿರುತ್ತಾರೆ ಹಾಗೂ ಉಪ ಸಮಿತಿಯು ವಿಷಯಗಳ ಮೇಲೆ ವಿವರವಾಗಿ ಚರ್ಚಿಸಿದ ವಿಷಯಗಳ ಪ್ರಸ್ತಾವನೆಗಳನ್ನು ರಾಜ್ಯ ವನ್ಯಜೀವಿ ಮಂಡಳಿಯ ಅಧ್ಯಕ್ಷರಾದ ಮಾನ್ಯ ಮುಖ್ಯ ಮಂತ್ರಿಗಳಿಗೆ ತೀರ್ಮಾನಕ್ಕಾಗಿ ಸಲ್ಲಿಸುವುದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 464 ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಶಾಖಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಕುರಿತು.

**ಓದಲಾಗಿದೆ** :
1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರ ಪತ್ರದ ಕ್ರಮಾಂಕ ಮುಇಂ/ಸನೀ/(ಉ)ವ/ಬಿಜಾ/ಎಇ-5/2010-11/6328, ದಿನಾಂಕ 01-12-2010.
2) ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(7), ದಿನಾಂಕ 24-12-2009
3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22-01-2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08-09/249.

***

**ಪ್ರಸ್ತಾವನೆ :**

ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಶಾಖಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 140.00 ಲಕ್ಷ ರೂ.ಗಳ ಅಂದಾಜಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 24-12-2009ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಗೆ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 22-09-2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 25-09-2010 |
| ವಿಜಯ ಕರ್ನಾಟಕ ದಿನಪತ್ರಿಕೆ | 23-09-2010 |
| ಕರ್ನಾಟಕ ರಾಜ್ಯ ಪತ್ರ | 23-09-2010 |

ಇ-ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರ್ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂವರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ್ದು. ಈ ಪೈಕಿ ಎಲ್ಲಾ ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಅವರ ಆರ್ಥಿಕ ಬಿಡ್ ತೆರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,35,53,184/- |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,66,82,562/- |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಯಂಕೋಬ ಯಾದವ ಪ್ರಥಮ ದರ್ಜೆ ಗುತ್ತಿಗೆದಾರರು | 1,84,54,176/- | 36.16 ಹೆಚ್ಚು | 10.619 ಹೆಚ್ಚು |
| 2 | ಶ್ರೀ ಎಸ್. ಎಂ. ಬೀರಾದಾರ ಪ್ರಥಮ ದರ್ಜೆ ಗುತ್ತಿಗೆದಾರರು | 1,90,84,928/- | 40.81 ಹೆಚ್ಚು | 14.40 ಹೆಚ್ಚು |
| 3 | ಮೆ॥ ಅಮೃತಾ ಕನ್ಸ್‌ಟ್ರಕ್ಷನ್ (ಪಿ. ವೆಂಕಟೇಶ್ವರ ರಾವ್) ಪ್ರಥಮ ದರ್ಜೆ ಗುತ್ತಿಗೆದಾರರು | 1,94,98,523/- | 43.86 ಹೆಚ್ಚು | 16.879 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಯಂಕೋಬ ಯಾದವ ಪ್ರಥಮ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರಿಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.619 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06–01–2011ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಇವರ ಟೆಂಡರನ್ನು ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,66,82,562/–ಗಳ ಮೇಲೆ ಶೇಕಡ 9.50 ರಷ್ಟು ಹೆಚ್ಚಿನ ದರಗಳಿಗೆ ಕಾಮಗಾರಿಯನ್ನು ಶ್ರೀ ಯಂಕೋಬ ಯಾದವ, ಒಂದನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿ, ಟೆಂಡರನ್ನು ಪರಿಷ್ಕೃತ ಮೊತ್ತದ ಮೇಲೆ ಶೇಕಡ 3.00 ರಷ್ಟು ಹೆಚ್ಚಿನ ದರಗಳಲ್ಲಿ ಅಂದರೆ ರೂ. 1,71,83,039/–ಗಳಿಗೆ ಕಾಮಗಾರಿಯನ್ನು ಶ್ರೀ ಯಂಕೋಬ ಯಾದವ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 55 ಅಪಿಬಂ 2010, ಬೆಂಗಳೂರು, ದಿನಾಂಕ: 04–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಶಾಖಾಪುರ ಗ್ರಾಮದ ಹತ್ತಿರ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,66,82,562/–ಗಳ ಮೇಲೆ ಶೇಕಡ 3.00 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,71,83,039/–ಗಳಿಗೆ (ಒಂದು ಕೋಟಿ ಎಪ್ಪತ್ತೊಂದು ಲಕ್ಷ ಎಂಬತ್ತ ಮೂರು ಸಾವಿರದ ಮುವತ್ತೊಂಬತ್ತು ರೂ.ಗಳು ಮಾತ್ರ) ಶ್ರೀ ಯಂಕೋಬ ಯಾದವ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 465 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ ಹುದ್ದೆಗಳನ್ನು ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸುವಿಕೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 170 ಪಸಸೇ 2006, ದಿನಾಂಕ 01–03–2007

2) ಪತ್ರ ಸಂಖ್ಯೆ: ಅಪಸಂ/ಯೋಜನೆ–3/ಲೆಕ್ಕಶೀರ್ಷಿಕೆ/2009–10, ದಿನಾಂಕ 02–11–2009, 11–10–2010 ಹಾಗೂ 26–11–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಡಾ॥ ಡಿ. ಎಂ. ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯ ಶಿಫಾರಸ್ಸಿನಂತೆ ಪಶುಚಿಕಿತ್ಸಾಲಯ ಕೊರತೆ ಇರುವ ಹಾಗೂ ಅವಶ್ಯಕವಿರುವ ತಾಲ್ಲೂಕುಗಳಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ತೆರೆಯಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ರಾಜ್ಯದ ಅತ್ಯಂತ ಹಿಂದುಳಿದ ತಾಲ್ಲೂಕಗಳಲ್ಲಿ 69 ಪಶುಚಿಕಿತ್ಸಾಲಯಗಳನ್ನು ತೆರೆಯಲಾಗಿದ್ದು, ಈ ಪೈಕಿ ಕೆಲವು ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳ ಪಟ್ಟಿಗೆ ಸೇರದೇ ಇದ್ದರೂ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ)ಯಲ್ಲಿಯೇ ವೇತನ ಮತ್ತು ಇತರೆ ಭತ್ಯೆಗಳನ್ನು ಭರಿಸಲಾಗುತ್ತಿರುವುದರಿಂದ ಸದರಿ ಕಾರ್ಯಕ್ರಮವನ್ನು ಬೇರ್ಪಡಿಸಿ ಪ್ರತ್ಯೇಕವಾಗಿ ಅನುಷ್ಠಾನಗೊಳಿಸಲು ರಾಮನಗರ ಪ್ರಗತಿ ಪರಿಶೀಲನಾ ಸಭೆಯಲ್ಲಿ ಅಭಿಪ್ರಾಯಪಟ್ಟಿರುವುದರಿಂದ ರಾಮನಗರ ಸೇರಿದಂತೆ ಬಾಗಲಕೋಟೆ, ಬಳ್ಳಾರಿ, ಉಡುಪಿ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿನ ಒಟ್ಟು 24 ಪಶುಚಿಕಿತ್ಸಾಲಯಗಳನ್ನು ಮಂಜೂರಾದ ಹುದ್ದೆಗಳೊಂದಿಗೆ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಯಿಂದ ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ಅನುದಾನ ಸಮೇತ ಹುದ್ದೆಗಳನ್ನು ವರ್ಗಾಯಿಸುವುದರಿಂದ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ಅನುದಾನ ಶೂನ್ಯವಾಗಲಿದ್ದು, ಸದರಿ ಅನುದಾನವನ್ನು ಬೇರೆ ಉದ್ದೇಶಕ್ಕಾಗಿ ಬಳಸಲು ಬರುವುದಿಲ್ಲವೆಂದು, ಹುದ್ದೆಗಳು ವರ್ಗಾವಣೆ ವೆಚ್ಚವನ್ನು ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿಯಲ್ಲಿ ನಿಗದಿಪಡಿಸಿರುವ ಅನುದಾನದಿಂದ ಹೊಂದಿಸಿಕೊಳ್ಳಬಹುದಾಗಿದೆಯೆಂದು, ಹುದ್ದೆಗಳ ವರ್ಗಾವಣೆಯಿಂದ ಯಾವುದೇ ರೀತಿಯ ತಾಂತ್ರಿಕ ತೊಂದರೆಯಾಗುವುದಿಲ್ಲವೆಂದು ತಿಳಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ಡಾ॥ ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯಂತೆ ಅತಿ ಹಿಂದುಳಿದ ಮತ್ತು ಹಿಂದುಳಿದ ಪ್ರದೇಶಗಳಲ್ಲಿ ಹೊಸದಾಗಿ ಪಶುವೈದ್ಯಕೀಯ ಸಂಸ್ಥೆಗಳನ್ನು ಪ್ರಾರಂಭಿಸಲು ತಗಲುವ ವೆಚ್ಚವನ್ನು ಭರಿಸಲು ಅನುದಾನವನ್ನು ನಿಗದಿಪಡಿಸಲಾಗಿದೆ. ಆದರೆ ಮುಧೋಳ, ಬಳ್ಳಾರಿ, ಉಡುಪಿ, ಕಾರ್ಕಳ, ಕುಂದಾಪುರ, ದಾವಣಗೆರೆ, ಹರಿಹರ, ಶಿವಮೊಗ್ಗ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ, ಚಿಕ್ಕೋಡಿ, ಬೆಳ್ತಂಗಡಿ, ಬಂಟ್ವಾಳ, ಪುತ್ತೂರು, ರಾಮನಗರ ತಾಲ್ಲೂಕುಗಳಿಗೆ ಮಂಜೂರಾಗಿರುವ ಪಶುಚಿಕಿತ್ಸಾಲಯಗಳಲ್ಲಿನ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ವೆಚ್ಚ ಭರಿಸಲಾಗುತ್ತಿದ್ದು, ಸದರಿ ತಾಲ್ಲೂಕುಗಳು ಡಾ॥ ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿ ಅನುಸಾರ ಅತಿ ಹಿಂದುಳಿದ ಮತ್ತು ಹಿಂದುಳಿದ ಪ್ರದೇಶಗಳ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ, ಈ ತಾಲ್ಲೂಕುಗಳಿಗೆ ಮಂಜೂರಾಗಿರುವ ಪಶುಚಿಕಿತ್ಸಾಲಯಗಳಲ್ಲಿನ ಹುದ್ದೆಗಳಿಗೆ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ವೆಚ್ಚ ಭರಿಸುವುದು ತಾಂತ್ರಿಕವಾಗಿ ಸಮಂಜಸವೆನಿಸುವುದಿಲ್ಲ, ಆದ್ದರಿಂದ ಮುಧೋಳ, ಬಳ್ಳಾರಿ, ಉಡುಪಿ, ಕಾರ್ಕಳ, ಕುಂದಾಪುರ, ದಾವಣಗೆರೆ, ಹರಿಹರ, ಶಿವಮೊಗ್ಗ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ, ಚಿಕ್ಕೋಡಿ, ಬೆಳ್ತಂಗಡಿ, ಬಂಟ್ವಾಳ, ಪುತ್ತೂರು, ರಾಮನಗರ ಪಶುಚಿಕಿತ್ಸಾಲಯಗಳನ್ನು ಮಂಜೂರಾದ ಹುದ್ದೆ ಮತ್ತು ಅನುದಾನದೊಂದಿಗೆ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಯಿಂದ ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸಲು ಆಯುಕ್ತರು ಶಿಫಾರಸ್ಸು ಮಾಡಿರುತ್ತಾರೆ. ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಹೊಸದಾಗಿ ಪ್ರಾರಂಭಗೊಂಡ ಪಶು ಆಸ್ಪತ್ರೆಗಳು, ಪಶುಚಿಕಿತ್ಸಾಲಯಗಳು, ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ ಮತ್ತು ಕೃತಕ ಗರ್ಭಧಾರಣಾ ಕೇಂದ್ರಗಳಲ್ಲಿನ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ವೇತನ ಭತ್ಯೆಗಳನ್ನು ಭರಿಸುವುದಕ್ಕೆ ಸಂಬಂಧಿಸಿದ್ದು, ಅನುದಾನ ಸಮೇತ ಹುದ್ದೆಗಳನ್ನು ವರ್ಗಾವಣೆ ಮಾಡುವುದರಿಂದ ಯಾವುದೇ ರೀತಿಯ ತಾಂತ್ರಿಕ ತೊಂದರೆಯಾಗುವುದಿಲ್ಲ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಬಾಗಲಕೋಟೆ, ಬಳ್ಳಾರಿ, ಉಡುಪಿ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ, ದಕ್ಷಿಣಕನ್ನಡ ಮತ್ತು ರಾಮನಗರ ಜಿಲ್ಲೆಗಳ ವಿವಿಧ ತಾಲ್ಲೂಕಿನ ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ ಹುದ್ದೆಗಳನ್ನು ಅನುದಾನ ಸಮೇತ ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 558 ಪಸಸೇ 2009, ಬೆಂಗಳೂರು, ದಿನಾಂಕ: 04–02–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಬಾಗಲಕೋಟೆ, ಬಳ್ಳಾರಿ, ಉಡುಪಿ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ, ದಕ್ಷಿಣಕನ್ನಡ ಮತ್ತು ರಾಮನಗರ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಈ ಕೆಳಕಂಡ ತಾಲ್ಲೂಕುಗಳ ಪಶುಚಿಕಿತ್ಸಾಲಯಗಳಿಗೆ ಲೆಕ್ಕಶೀರ್ಷಿಕೆ 2403–00–800–0–59 (ಯೋಜನೆ) ಅಡಿ ಮಂಜೂರಾಗಿರುವ ಹುದ್ದೆಗಳನ್ನು ಅನುದಾನ ಸಮೇತ ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಇಲ್ಲಿಗೆ ವರ್ಗಾಯಿಸಲಾಗಿದೆ.

| ಕ್ರ. ಸಂ. | ಜಿಲ್ಲೆ | ತಾಲ್ಲೂಕು | ಪಶುವೈದ್ಯಕೀಯ ಸಂಸ್ಥೆ | ಹುದ್ದೆಗಳು | | | |
|---|---|---|---|---|---|---|---|
| | | | | ಪಶು ವೈದ್ಯರು | ಪಶುವೈದ್ಯ ಪರೀಕ್ಷಕರು | "ಡಿ" ದರ್ಜೆ | ಒಟ್ಟು ಹುದ್ದೆ |
| 1 | 2 | 3 | 4 | 5 | 6 | 7 | 8 |
| 1 | ಬಾಗಲಕೋಟೆ | ಮುಧೋಳ | 1. ಪಶುಚಿಕಿತ್ಸಾಲಯ, ಸೈದಾಪುರ | 1 | 1 | 2 | 4 |
| | | | 2. ಪಶುಚಿಕಿತ್ಸಾಲಯ, ಚಿಕ್ಕೂರ | 1 | 1 | 2 | 4 |
| | | | 3. ಪಶುಚಿಕಿತ್ಸಾಲಯ, ದಾದನಟ್ಟಿ | 1 | 1 | 2 | 4 |
| 2 | ಬಳ್ಳಾರಿ | ಬಳ್ಳಾರಿ | 4. ಪಶುಚಿಕಿತ್ಸಾಲಯ, ಕೊರ್ಲಗುಂದಿ | 1 | 1 | 1 | 3 |
| | | | 5. ಪಶುಚಿಕಿತ್ಸಾಲಯ, ಅಮರಾಪುರ | 1 | 1 | 1 | 3 |
| | | | 6. ಪಶುಚಿಕಿತ್ಸಾಲಯ, ಕೊಳಗಲ್ಲು | 1 | 1 | 1 | 3 |
| 3 | ಉಡುಪಿ | ಉಡುಪಿ | 7. ಪಶುಚಿಕಿತ್ಸಾಲಯ, ಆವರ್ಸೆ | 1 | 1 | 2 | 4 |
| | | | 8. ಪಶುಚಿಕಿತ್ಸಾಲಯ, ಶಿರಿಯಾರ | 1 | 1 | 2 | 4 |
| | | | 9. ಪಶುಚಿಕಿತ್ಸಾಲಯ, ಗುಂಡ್ಮಿ | 1 | 1 | 2 | 4 |
| | | ಕಾರ್ಕಳ | 10. ಪಶುಚಿಕಿತ್ಸಾಲಯ, ಹೀರ್ಗಾ | 1 | 1 | 2 | 4 |
| | | ಕುಂದಾಪುರ | 11. ಪಶುಚಿಕಿತ್ಸಾಲಯ, ಜಡ್ಕಲ್ | 1 | 1 | 2 | 4 |
| 4 | ದಾವಣಗೆರೆ | ದಾವಣಗೆರೆ | 12. ಪಶುಚಿಕಿತ್ಸಾಲಯ, ದೊಡ್ಡರಂಗವ್ವನಹಳ್ಳಿ | 1 | 1 | 2 | 4 |
| | | ಹರಿಹರ | 13. ಪಶುಚಿಕಿತ್ಸಾಲಯ, ಧೂಳೆಹೊಳೆ | 1 | 1 | 2 | 4 |
| 5 | ಶಿವಮೊಗ್ಗ | ಶಿವಮೊಗ್ಗ | 14. ಪಶುಚಿಕಿತ್ಸಾಲಯ, ಮರದಾಳು | 1 | 1 | 2 | 4 |
| | | ಭದ್ರಾವತಿ | 15. ಪಶುಚಿಕಿತ್ಸಾಲಯ, ಮಂಗೋಟೆ | 1 | 1 | 2 | 4 |
| | | ಹೊಸನಗರ | 16. ಪಶುಚಿಕಿತ್ಸಾಲಯ, ಹಾರೋಹಿತ್ತಲು | 1 | 1 | 2 | 4 |
| | | ತೀರ್ಥಹಳ್ಳಿ | 17. ಪಶುಚಿಕಿತ್ಸಾಲಯ, ಕುಡುಮಲ್ಲಿಗೆ | 1 | 1 | 2 | 4 |

| | | | | | | | |
|---|---|---|---|---|---|---|---|
| 6 | ಬೆಳಗಾವಿ | ಚಿಕ್ಕೋಡಿ | 18. ಪಶುಚಿಕಿತ್ಸಾಲಯ, ನವಲಿಹಾಳ | 1 | 1 | 2 | 4 |
| 7 | ದಕ್ಷಿಣ ಕನ್ನಡ | ಬೆಳ್ತಂಗಡಿ | 19. ಪಶುಚಿಕಿತ್ಸಾಲಯ, ಚಾರ್ಮಾಡಿ | 1 | 1 | 2 | 4 |
| | | | 20. ಪಶುಚಿಕಿತ್ಸಾಲಯ, ಉಜಿರೆ | 1 | 1 | 2 | 4 |
| | | ಬಂಟ್ವಾಳ | 21. ಪಶುಚಿಕಿತ್ಸಾಲಯ, ಮೂರ್ಜೆ | 1 | 1 | 2 | 4 |
| | | ಪುತ್ತೂರು | 22. ಪಶುಚಿಕಿತ್ಸಾಲಯ, ಕೌಕ್ರಾಡಿ | 1 | 1 | 2 | 4 |
| 8 | ರಾಮನಗರ | ರಾಮನಗರ | 23. ಪಶುಚಿಕಿತ್ಸಾಲಯ, ದೊಡ್ಡಗಂಗನವಾಡಿ | 1 | 1 | 2 | 4 |
| | | | 24. ಪಶುಚಿಕಿತ್ಸಾಲಯ, ಗಾಣಕಲ್ಲು | 1 | 1 | 2 | 4 |
| | | | **ಒಟ್ಟು** | **24** | **24** | **45** | **93** |

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 33 ವೆ.4/2011, ದಿನಾಂಕ 25–01–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪಿ. ನಾಗರಾಜ**

ಪೀಠಾಧಿಕಾರಿ–2

ಪಿ.ಆರ್. ನಂ. 466

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

## ವಸತಿ ಸಚಿವಾಲಯ

**ವಿಷಯ** : ಶಿಕಾರಿಪುರ ಪಟ್ಟಣದ ವಿವಿಧ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ರವರ ಪತ್ರ ಸಂಖ್ಯೆ: ಕಕೊನಿಮ/ಆಯುಕ್ತರು/ಶಿಕಾರಿಪುರ–ಅಭಿವೃದ್ಧಿ/2010–11/658, ದಿನಾಂಕ 10–11–2010.

2) ಆರ್ಥಿಕ ಇಲಾಖೆಯ ಹಿಂಬರಹ ಟಿಪ್ಪಣಿ ಸಂಖ್ಯೆ ಆಇ 38 ವೆಚ್ಚ–9/2011, ದಿನಾಂಕ 02–02–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆಯುಕ್ತರು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಶಿಕಾರಿಪುರ ಪಟ್ಟಣದ ಘೋಷಿತ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಾದ ರಸ್ತೆ, ಚರಂಡಿ, ಅಡ್ಡಮೋರಿ ಮತ್ತು ತಡೆಗೋಡೆ ಕಾಮಗಾರಿಗಳನ್ನು 16 ಕೊಳಚೆ ಪ್ರದೇಶದಲ್ಲಿ ಕೈಗೊಳ್ಳಲು ₹ 29.00 ಕೋಟಿಗಳ ಯೋಜನಾ ವರದಿಗಳನ್ನು ಸಲ್ಲಿಸಿ ಅನುದಾನ ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕ್ರಮ ಸಂಖ್ಯೆ (2)ರಲ್ಲಿ ಶಿಕಾರಿಪುರ ಪಟ್ಟಣದ ವಿವಿಧ ಕೊಳಚೆ ಪ್ರದೇಶಗಳ ಅಭಿವೃದ್ಧಿ ಕಾಮಗಾರಿಗಳಿಗೆ 2010–11ನೇ ಸಾಲಿನ ಆಯವ್ಯಯದ ಪೂರಕ ಅಂದಾಜು–IIIರಲ್ಲಿ ಲೆಕ್ಕಶೀರ್ಷಿಕೆ 2217–04–191–2–02 ಯಡಿ ರೂ. 5.00 ಕೋಟಿಗಳ ಹೆಚ್ಚುವರಿ ಅನುದಾನವನ್ನು ಒದಗಿಸಿದ್ದು ಬಾಕಿ ಉಳಿದ ಅನುದಾನವನ್ನು 2011–12ನೇ ಸಾಲಿನ ಆಯವ್ಯಯದಲ್ಲಿ ಒದಗಿಸುವುದಾಗಿ ತಿಳಿಸಲಾಗಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಅದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 33 ಕೊಮಂಲೆ 2010, ಬೆಂಗಳೂರು, ದಿನಾಂಕ: 03–02–2011**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳೆಗೇರಿ ಅಭಿವೃದ್ಧಿ ಮಂಡಳಿಗೆ ಶಿಕಾರಿಪುರ ಪಟ್ಟಣದ ಘೋಷಿತ ಕೊಳಚೆ ಪ್ರದೇಶಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಾದ ರಸ್ತೆ, ಚರಂಡಿ, ಅಡ್ಡಮೋರಿ ಮತ್ತು ತಡೆಗೋಡೆ ಕಾಮಗಾರಿಗಳನ್ನು 16 ಕೊಳಚೆ ಪ್ರದೇಶದಲ್ಲಿ ಕೈಗೊಳ್ಳಲು ₹ 05.00 ಕೋಟಿಗಳ (ಐದು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಿದ್ದು, ಸದರಿ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯದ ಪೂರಕ ಅಂದಾಜು–III ರಲ್ಲಿ ಲೆಕ್ಕಶೀರ್ಷಿಕೆ 2217–04–191–2–02 ಯಡಿಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ಈ ಅನುದಾನವನ್ನು ಈ ಕೆಳಕಂಡ ನಿಬಂಧನೆಗೊಳಪಟ್ಟು ಬಿಡುಗಡೆ ಗೊಳಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ38/ವೆಚ್ಚ–9/2011, ದಿನಾಂಕ 02–02–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಆರ್. ನಾಗರಾಜ**

ಪಿ.ಆರ್. ನಂ. 467

ಪೀಠಾಧಿಕಾರಿ–4, ವಸತಿ ಇಲಾಖೆ

## PERSONNEL AND ADMINISTRATIVE REFORMS SECRETARIAT

**Sub :-** Deputation of officers to the one week In-service programme-issue of orders-reg.

**Read :-** Letters No. 12017/01/2010-TNP(S), dated 17-01-2011 and 19-01-2011 from Sri P. K. Subnani, Joint Director (Trg.) Government of India, Ministry of PPG&P.DoPT, Training Division, New Delhi.

**Preamble:-**

In the D.O. letters dated 17-01-2011 and 19-01-2011 read above, the Joint Director (Trg.) Department of Personnel and Training (Training Division), Government of India, New Delhi has stated that (1) Sri Ashok Kumar C. Manoli, IAS, Principal Secretary to Government, Department of Information Technology, Bio-Technology & Science & Technology, Bangalore. (2) Sri Parmesh Pandey, IAS, Managing Director, Karnataka Silk Marketing Board, Bangalore. (3) Sri Mohd. A. Sadiq, IAS, managing Director, Cauvery Neeravari Nigama Ltd., Bangalore and (4) Smt. Rashmi V. Mahesh, IAS, Additional Commissioner of Excise, Bangalore, have been nominated for one week in-service training programme on "Agriculture and Rural Development Emerging issues and Policy Response" at Indian Institute of Management, Bangalore, from 14-02-2011 to 18-02-2011. The proposal has been examined and the following orders are issued.

**Government Order No.: DPAR 113 SIS 2010, Bangalore, Dated 08-02-2011**

Government is pleased to depute the "following officers to participate in the one week's In-service training programme on "Agriculture and Rural Development Emerging issues and Policy Response" at Indian Institute of Management, Bangalore, from 14-02-2011 to 18-02-2011.

1) Sri Ashok Kumar C. Manoli, IAS (KN-82), Principal Secretary to Government, Department of Information Technology, Bio-Technology & Science & Technology, Bangalore.
2) Sri Parmesh Pandey, IAS (KN-85), Managing Director, Karnataka Silk Marketing Board, Bangalore.
3) Sri Mohd. A. Sadiq, IAS (KN-93), Managing Director, Cauvery Neeravari Nigama Ltd., Bangalore and
4) Smt. Rashmi V. Mahesh, IAS (KN-96), Additional Commissioner of Excise, Bangalore.

The period of deputation including the time reasonably required for the to and fro Journey shall be treated as on 'duty' and the expenses towards course fee, boarding and lodging charges will be borne by the Government of India. The officers are also entitled to draw advance TA/DA as per rules subject to adjustment in the final bill.

By Order and in the name of the Governor of Karnataka
**Ashok P. Atre**
Under Secretary to Government I/C
DP&AR (Services-1)

PR. No. 468

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 19–01–2009
2) ಸರ್ಕಾರದ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 30–03–2009
3) ಸರ್ಕಾರದ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 20–10–2009
4) ಸರ್ಕಾರದ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 29–10–2009
5) ಸರ್ಕಾರದ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 11–02–2010
6) ಸರ್ಕಾರದ ಆದೇಶ ಸಂಖ್ಯೆ ಐಟಿಡಿ 68 ಎಡಿಎಂ 2010, ದಿನಾಂಕ 03–07–2010
7) ಸರ್ಕಾರದ ಆದೇಶ ಸಂಖ್ಯೆ ಐಟಿಡಿ 39 ಎಡಿಎಂ 2010, ದಿನಾಂಕ 17–09–2010
8) ಸರ್ಕಾರದ ಆದೇಶ ಸಂಖ್ಯೆ ಐಟಿಡಿ 39 ಎಡಿಎಂ 2008, ದಿನಾಂಕ 28–09–2010
9) ಅಪರ ವ್ಯವಸ್ಥಾಪಕ ನಿರ್ದೇಶಕರು ಕೆಬಿಟ್ಸ್ ಇವರ ಪತ್ರದ ಸಂಖ್ಯೆ: ಕೆಬಿಟ್ಸ್/ಕೈ.ಉ.ಅ/ ಗ್ರಾಬಿಪಿಓ/22/2010–11, ದಿನಾಂಕ 12–01–2011

**ಪ್ರಸ್ತಾವನೆ :**

ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ. ಕೇಂದ್ರವು ರಾಜ್ಯ ಸರ್ಕಾರದಿಂದ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುವ ಬಗ್ಗೆ ಆದೇಶ ಹೊರಡಿಸಲಾಗಿದೆ.

ಮೇಲೆ (2) ರಿಂದ 5 ಮತ್ತು (7) ರಲ್ಲಿ ಓದಲಾದ ಆದೇಶಗಳಲ್ಲಿ 2008–09ನೇ ಸಾಲಿನಿಂದ ಇಲ್ಲಿಯವರೆಗೆ ರೂ. 520.00 ಲಕ್ಷಗಳನ್ನು ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಈಗಾಗಲೇ ಬಿಡುಗಡೆ ಮಾಡಿದೆ.

ಮೇಲೆ [6]ರಲ್ಲಿ ಓದಲಾದ ದಿನಾಂಕ 03–07–2010ರ ಆದೇಶದಲ್ಲಿ ಸದರಿ ಯೋಜನೆಯನ್ನು 2010–11ನೇ ಸಾಲಿಗೆ ಮುಂದುವರೆಸಲಾಗಿದ್ದು ಲೆಕ್ಕಶೀರ್ಷಿಕೆ "3451–00–090–2–23 ಗ್ರಾಮೀಣ ಬಿ.ಪಿ.ಓ.ಗಳು–059 ಇತರೆ ಖರ್ಚುಗಳು" ಇದರಡಿಯಲ್ಲಿ ಒದಗಿಸಲಾಗಿರುವ ರೂ. 800 ಲಕ್ಷಗಳನ್ನು ವಿನಿಯೋಗಿಸುವ ಬಗ್ಗೆ ಅನುಮೋದಿಸಲಾಗಿದೆ.

ಮೇಲೆ [9]ರಲ್ಲಿ ಓದಲಾದ ಕೆಬಿಟ್ಸ್ ಸಂಸ್ಥೆಯ ಅಪರ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ 12–01–2011ರ ಪತ್ರದಲ್ಲಿ ಒಟ್ಟು 32 ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪನೆ ಮಾಡಲು ಇಲ್ಲಿಯವರೆಗೆ ಸರ್ಕಾರದಿಂದ ಮಂಜೂರಾತಿಯನ್ನು ಪಡೆಯಲಾಗಿದ್ದು ಅದರಲ್ಲಿ ಈಗಾಗಲೇ 16 ಕೇಂದ್ರಗಳನ್ನು ಸ್ಥಾಪನೆ ಮಾಡಿರುವ ಬಗ್ಗೆ ಉಲ್ಲೇಖಿಸುತ್ತಾ ಉಳಿದ 16 ಕೇಂದ್ರಗಳಲ್ಲಿ 10 ಕೇಂದ್ರಗಳನ್ನು 15ನೇ ಜನವರಿ 2011ರೊಳಗೆ ಸ್ಥಾಪನೆ ಮಾಡಿ ಕಾರ್ಯಾರಂಭಗೊಳಿಸಲು ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ ರೂ. 200.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲು ಕೋರಿದ್ದಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ (7) ಮತ್ತು (8)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಒಟ್ಟು ರೂ. 200 ಲಕ್ಷಗಳನ್ನು ಬಿಡುಗಡೆ ಮಾಡಿದೆ. 2010–11ನೇ ಸಾಲಿನಲ್ಲಿ ಗ್ರಾಮೀಣ ಬಿಪಿಓಗಳ ಯೋಜನೆ ಅನುಷ್ಠಾನಕ್ಕಾಗಿ ಮತ್ತೆ ರೂ. 200 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 08–02–2011**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಸರ್ಕಾರದಿಂದ ಅನುಮೋದಿಸಲ್ಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಲುವಾಗಿ ಆರ್ಥಿಕ ಬೆಂಬಲ ನೀಡಲು, 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–02–23 ಗ್ರಾಮೀಣ ಬಿ.ಪಿ.ಓ.ಗಳು–059 ಇತರೆ ಖರ್ಚುಗಳು" ಇದರಡಿಯಲ್ಲಿ ಒದಗಿಸಲಾಗಿರುವ ರೂ. 800 ಲಕ್ಷಗಳ ಅನುದಾನದಲ್ಲಿ ರೂ. 200 ಲಕ್ಷಗಳನ್ನು [ರೂ. ಇನ್ನೂರು ಲಕ್ಷಗಳು ಮಾತ್ರ] ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ–ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00–090–2–23 ಗ್ರಾಮೀಣ ಬಿ.ಪಿ.ಓ.ಗಳು–059 ಇತರೆ ಖರ್ಚುಗಳು" ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ [ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು] ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:31:ವೆಚ್ಚ 2:2011, ದಿನಾಂಕ 02–02–2011 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. ನಂ. 469

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಶಿವಪ್ಪ ಹೆಚ್. ಲಮಾಣಿ, ತಹಶೀಲ್ದಾರ್, ಸಂಡೂರು ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಬಳ್ಳಾರಿ ಇವರ ಪತ್ರ ಸಂಖ್ಯೆ: ಕಂ.ಚುನಾವಣೆ/ಟಿಜಡ್‌ಪಿ/134/2010–11, ದಿನಾಂಕ 27–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ 27–12–2010ರಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು, ಬಳ್ಳಾರಿ ರವರ ಪತ್ರದಲ್ಲಿ ಶ್ರೀ ಶಿವಪ್ಪ ಹೆಚ್. ಲಮಾಣಿ, ತಹಶೀಲ್ದಾರರು, ಸಂಡೂರು ತಾಲ್ಲೂಕು ಇವರು ಸಂಡೂರು ತಾಲ್ಲೂಕು ಪಂಚಾಯಿತಿ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ನಂ. 10 ಭಜಂಗನಗರಗೆ ಸಂಬಂಧಿಸಿದಂತೆ, ಪತ್ರ ತಯಾರಿಕೆಯಲ್ಲಿ ಅಭ್ಯರ್ಥಿಗಳ ಹೆಸರು ಸರಿಯಾಗಿದ್ದು, ಆದರೆ ಚಿಹ್ನೆ ಬದಲಾಗಿ ಮುದ್ರಿತವಾಗಿದ್ದು, ಹೆಸರು ಪರಿಶೀಲಿಸದೇ ಬ್ಯಾಲೆಟ್ ಯುನಿಟ್ ಸಿದ್ಧಪಡಿಸಿ ಲೋಪ ಎಸಗಿರುವುದರಿಂದ ಇವರನ್ನು ತಕ್ಷಣವೇ ಜಾರಿಗೆ ಬರುವಂತೆ ಜಿಲ್ಲಾಧಿಕಾರಿಗಳು ಉಲ್ಲೇಖಿತ ದಿನಾಂಕ 27–12–2010ರ ಆದೇಶದಲ್ಲಿ ಶ್ರೀ ಶಿವಪ್ಪ ಹೆಚ್. ಲಮಾಣಿ, ತಹಶೀಲ್ದಾರ್ ರವರನ್ನು ಅಮಾನತ್ತುಗೊಳಿಸಿರುತ್ತಾರೆ ಮತ್ತು ಈ ರೀತಿ ಆದೇಶಿಸಿದ್ದನ್ನು ಅನುಸಮರ್ಥನೆ (Ratify) ಮಾಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಜಿಲ್ಲಾಧಿಕಾರಿಗಳ ದಿನಾಂಕ 27-12-2010ರ ಅಮಾನತ್ತು ಆದೇಶವನ್ನು ಕೈಬಿಟ್ಟು, ಸದರಿಯವರನ್ನು ಸಂಡೂರು ತಾಲ್ಲೂಕಿನಲ್ಲಿಯೇ ಮುಂದುವರೆಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 04 ಎಡಿಇ 2011, ಬೆಂಗಳೂರು, ದಿನಾಂಕ: 04-02-2011**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಶಿವಪ್ಪ ಹೆಚ್. ಲಮಾಣಿ, ತಹಶೀಲ್ದಾರ್, ಸಂಡೂರು ತಾಲ್ಲೂಕು ಇವರನ್ನು ಅಮಾನತ್ತುಗೊಳಿಸಿ ಆದೇಶಿಸಿದ್ದ ಜಿಲ್ಲಾಧಿಕಾರಿಗಳ ದಿನಾಂಕ 27-12-2010ರ ಆದೇಶವನ್ನು ಕೈಬಿಟ್ಟು, ಸದರಿಯವರನ್ನು ಸಂಡೂರು ತಾಲ್ಲೂಕಿನ ತಹಶೀಲ್ದಾರ್ ಹುದ್ದೆಯಲ್ಲಿಯೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. ನಂ. 470 ಕಂದಾಯ ಇಲಾಖೆ (ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ದಿನಾಂಕ 15-02-2011 ರಿಂದ 16-02-2011 ರವರೆಗೆ ಅಖಿಲ ಭಾರತ ರಾಜ್ಯ ಸರ್ಕಾರಿ ನೌಕರರ ಒಕ್ಕೂಟದಿಂದ ಕೋಲ್ಕತ್ತಾ ನಗರದಲ್ಲಿ ಏರ್ಪಡಿಸಲಾಗಿರುವ ಅಖಿಲ ಭಾರತ ಮಹಿಳಾ ನೌಕರರ ರಾಷ್ಟ್ರೀಯ ಸಮಾವೇಶದಲ್ಲಿ ಭಾಗವಹಿಸಲು ಅಖಿಲ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಒಕ್ಕೂಟದಿಂದ ವಿವಿಧ ಜಿಲ್ಲೆಗಳು/ವಿವಿಧ ಇಲಾಖೆಗಳ 30 ಮಂದಿ ಮಹಿಳಾ ನೌಕರರಿಗೆ (ಪ್ರತಿನಿಧಿಗಳು) ಮತ್ತು ಸದರಿ ಒಕ್ಕೂಟದ 03 ಮಂದಿ ಪದಾಧಿಕಾರಿಗಳಿಗೆ ವಿಶೇಷ ಸಾಂದರ್ಭಿಕ ರಜೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು/ಪ್ರಧಾನ ಕಾರ್ಯದರ್ಶಿ, ಅಖಿಲ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಒಕ್ಕೂಟ (ರಿ) ಇವರ ದಿನಾಂಕ: 25-01-2011ರ ಪತ್ರ ಸಂಖ್ಯೆ: 05/ಅಕರಾಸನೌಒ/2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಅಧ್ಯಕ್ಷರು/ಪ್ರಧಾನ ಕಾರ್ಯದರ್ಶಿ, ಅಖಿಲ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಒಕ್ಕೂಟ (ರಿ), ಬೆಂಗಳೂರು ಇವರು ದಿನಾಂಕ 15-02-2011 ರಿಂದ 16-02-2011 ರವರೆಗೆ ಅಖಿಲ ಭಾರತ ರಾಜ್ಯ ಸರ್ಕಾರಿ ನೌಕರರ ಒಕ್ಕೂಟದಿಂದ ಪಶ್ಚಿಮ ಬಂಗಾಳ ರಾಜ್ಯದ ಕೋಲ್ಕತ್ತಾ ನಗರದಲ್ಲಿ ಏರ್ಪಡಿಸಲಾಗಿರುವ, ಅಖಿಲ ಭಾರತ ಮಹಿಳಾ ನೌಕರರ ರಾಷ್ಟ್ರೀಯ ಸಮಾವೇಶದಲ್ಲಿ ಕರ್ನಾಟಕ ರಾಜ್ಯದ ವಿವಿಧ ಇಲಾಖೆಗಳು/ವಿವಿಧ ಜಿಲ್ಲೆಗಳ 30 ಮಂದಿ ಮಹಿಳಾ ನೌಕರರು (ಪ್ರತಿನಿಧಿಗಳು) ಹಾಗೂ ಇವರ ಜೊತೆ ತೆರಳುವ ಸದರಿ ಒಕ್ಕೂಟದ 03 ಜನ ಪದಾಧಿಕಾರಿಗಳು, ಸದರಿ ಸಮಾವೇಶದಲ್ಲಿ ದಿನಾಂಕ 14-02-2011 ರಿಂದ 19-02-2011 ರವರೆಗೆ (ದಿನಾಂಕ 16-02-2011ರ ಸಾರ್ವತ್ರಿಕ ರಜೆಯನ್ನು ಹೊರತುಪಡಿಸಿ) ಈ ಅವಧಿಯನ್ನು ಅನ್ಯಕಾರ್ಯ ನಿಮಿತ್ತ (ಓಓಡಿ) ಎಂದು ಪರಿಗಣಿಸಿ, ಈ ಸೌಲಭ್ಯವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಮೇಲಿನ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 11 ಇಭಾತ 2011, ಬೆಂಗಳೂರು, ದಿನಾಂಕ : 10ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಅಖಿಲ ಭಾರತ ರಾಜ್ಯ ಸರ್ಕಾರಿ ನೌಕರರ ಒಕ್ಕೂಟದ ವತಿಯಿಂದ ದಿನಾಂಕ 15-02-2011 ರಿಂದ 16-02-2011 ರವರೆಗೆ ಪಶ್ಚಿಮ ಬಂಗಾಳ ರಾಜ್ಯದ ಕೋಲ್ಕತ್ತಾ ನಗರದಲ್ಲಿ ನಡೆಯಲಿರುವ ಅಖಿಲ ಭಾರತ ಮಹಿಳಾ ನೌಕರರ ರಾಷ್ಟ್ರೀಯ ಸಮಾವೇಶದಲ್ಲಿ ಭಾಗವಹಿಸಲಿರುವ, ಕರ್ನಾಟಕ ರಾಜ್ಯದ ವಿವಿಧ ಇಲಾಖೆಗಳು/ವಿವಿಧ ಜಿಲ್ಲೆಗಳ 30 ಮಂದಿ ಮಹಿಳಾ ನೌಕರರು (ಪ್ರತಿನಿಧಿಗಳು) ಹಾಗೂ ಇವರ ಜೊತೆ ತೆರಳುವ ಸದರಿ ಒಕ್ಕೂಟದ 03 ಜನ ಪದಾಧಿಕಾರಿಗಳಿಗೆ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಸದರಿ ಸಮಾವೇಶದಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ: 14-02-2011 ರಿಂದ 19-02-2011 ರವರೆಗೆ ವಿಶೇಷ ಸಾಂದರ್ಭಿಕ ರಜೆಯನ್ನು ಈ ಮೂಲಕ ಮಂಜೂರು ಮಾಡಲಾಗಿದೆ.

ಆದರೆ, ಸದರಿ ಸಮ್ಮೇಳನದಲ್ಲಿ ಭಾಗವಹಿಸುವ ಪ್ರತಿನಿಧಿಗಳಿಗೆ ಹಾಗೂ ಪದಾಧಿಕಾರಿಗಳಿಗೆ ಈ ಸಂಬಂಧ ಮಂಜೂರಾದ ವಿಶೇಷ ಸಾಂದರ್ಭಿಕ ರಜೆಯನ್ನು ಹೊರತುಪಡಿಸಿ, ಈ ಬಗ್ಗೆ ಯಾವುದೇ ಪ್ರಯಾಣ ಭತ್ಯೆ/ದಿನಭತ್ಯೆ (ಟಿಎ/ಡಿಎ) ಅಥವಾ ಬೇರೆ ಯಾವುದೇ ಸೌಲಭ್ಯ ಅಥವಾ ಆರ್ಥಿಕ ಸಹಾಯವನ್ನು ನೀಡಲಾಗುವುದಿಲ್ಲ.

ಸಮ್ಮೇಳನದಲ್ಲಿ ಭಾಗವಹಿಸುವ 30 ಮಂದಿ ಮಹಿಳಾ ನೌಕರರು (ಪ್ರತಿನಿಧಿಗಳು) ಹಾಗೂ ಇವರ ಜೊತೆ ತೆರಳುವ ಸದರಿ ಒಕ್ಕೂಟದ 03 ಜನ ಪದಾಧಿಕಾರಿಗಳು ಈ ಸಮ್ಮೇಳನದಲ್ಲಿ ಭಾಗವಹಿಸಿರುವುದಕ್ಕಾಗಿ ಹಾಜರಿ ಪ್ರಮಾಣ ಪತ್ರವನ್ನು ಪಡೆದು, ಅದನ್ನು ತಪ್ಪದೆ ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಲಾಗಿದೆ.

ಸಿಆಸುಇ (ಸೇವಾ ನಿಯಮಗಳು-1) ವಿಭಾಗವು ತನ್ನ ಟಿಪ್ಪಣಿ ಸಂಖ್ಯೆ: ಸಿಆಸುಇ 4 ಸೇಸವಿ 2011 ದಿನಾಂಕ: 02-02-2011 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 215 ಸೇ-3/11 ದಿನಾಂಕ 08-02-2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಅಬ್ದುಲ್ ರೆಹಮಾನ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ. ಆರ್. 471 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು-ತರಬೇತಿ)

## ಇಂಧನ ಸಚಿವಾಲಯ

**ವಿಷಯ :** ಮೆ: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶದಲ್ಲಿ ಅಕ್ಷಾಂಶ ಮತ್ತು ರೇಖಾಂಶವನ್ನು ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 62 ಎನ್‌ಸಿಇ 2009 ದಿನಾಂಕ: 17-02-2009.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್-300/ಗಾಂಧಿನಗರ ಎಂಹೆಚ್‌ಎಸ್/232 ದಿನಾಂಕ: 14-01-2001.

**ಪ್ರಸ್ತಾವನೆ :**

ಮೆ: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಗಾಂಧಿನಗರ/ತೆಲ್ಲನೂರ್ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-Latitude: $12^0$18'8'' N & Longitude: $77^0$19'49'' E and Power House-Latitude: $12^0$16'54'' N & Longitude: $77^0$21'15'' E) ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೇಲೆ ತಿಳಿಸಿದ ಅಕ್ಷಾಂಶ ಮತ್ತು ರೇಖಾಂಶಗಳನ್ನೊಳಗೊಂಡ ಯೋಜನಾ ಪ್ರದೇಶ 'Wild Life Boundary' ವ್ಯಾಪ್ತಿಯಲ್ಲಿ ಬರುವುದರಿಂದ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸದರಿ ಯೋಜನೆಯ ಸ್ಥಳದ ಅಕ್ಷಾಂಶ ಮತ್ತು ರೇಖಾಂಶಗಳನ್ನು ಈ ಕೆಳಗಿನಂತೆ ಮಾರ್ಪಡಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ:–

| Weir | | Power House | | FRL | TWL |
|---|---|---|---|---|---|
| Longitude | Latitude | Longitude | Latitude | 388 | 379 |
| $77^0$15'0'' E | $12^0$18'30'' N | $77^0$15'16'' E | $12^0$18'40' N | | |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 34 ಎನ್‌ಸಿಇ 2011, ಬೆಂಗಳೂರು, ದಿನಾಂಕ : 7ನೇ ಫೆಬ್ರವರಿ 2011.**

ಮೆ: ಮಹದೇಶ್ವರ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸರ್ಕಾರದ ಆದೇಶ ಸಂಖ್ಯೆ: ಇಎನ್ 62 ಎನ್‌ಸಿಇ 2009 ದಿನಾಂಕ: 17–02–2009ರಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಗಾಂಧಿನಗರ/ತೆಲ್ಲನೂರ್ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿದ್ದು ಈ ಆದೇಶದ ಅಕ್ಷಾಂಶ ಮತ್ತು ರೇಖಾಂಶವನ್ನು ಈ ಕೆಳಗಿನಂತೆ ಭಾಗಶಃ ಮಾರ್ಪಡಿಸಲಾಗಿದೆ:–

| Weir | | Power House | | FRL | TWL |
|---|---|---|---|---|---|
| Longitude | Latitude | Longitude | Latitude | 388 | 379 |
| $77^0$15'0'' E | $12^0$18'30'' N | $77^0$15'16'' E | $12^0$18'40' N | | |

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ. ಆರ್. 472

## ಇಂಧನ ಸಚಿವಾಲಯ

**ವಿಷಯ :** ಮೆ: ನಮನ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 122 ಎನ್‌ಸಿಇ 2008 ದಿನಾಂಕ: 26–11–2009.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–345/ಅರದಾಳು/04 ದಿನಾಂಕ: 29–12–2010/01–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ನಮನ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಅರದಾಳು ಗ್ರಾಮದ ಸೀತಾ ನದಿಗೆ ಅಡ್ಡಲಾಗಿ (tributary to Tunga river) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸದರಿ ಯೋಜನೆಯ ಸ್ಥಳದಲ್ಲಿ ವಾಟರ್ ಹೆಡ್ ಮತ್ತು ವಾಟರ್ ಡಿಸ್ಚಾರ್ಜ್ ಉಪಯೋಗಿಸಿಕೊಂಡು ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 09 ಎನ್‌ಸಿಇ 2011, ಬೆಂಗಳೂರು, ದಿನಾಂಕ : 5ನೇ ಫೆಬ್ರವರಿ 2011.**

ಮೆ: ನಮನ ಹೈಡ್ರೊ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಅರದಾಳು ಗ್ರಾಮದ ಸೀತಾ ನದಿಗೆ ಅಡ್ಡಲಾಗಿ (tributary to Tunga river) ಹಂಚಿಕೆಯಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ. ಆರ್. 473

## ಇಂಧನ ಸಚಿವಾಲಯ

**ವಿಷಯ :** ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಿಯಡ್ಕ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 376 ಎನ್‌ಸಿಇ 2007 ದಿನಾಂಕ: 30–06–2009.
2. ಸೇರ್ಪಡೆ ಆದೇಶ ಸಂಖ್ಯೆ: ಇಎನ್ 376 ಎನ್‌ಸಿಇ 2007 ದಿನಾಂಕ: 10–08–2010.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್/323/ಗುಂಡಿಯಡ್ಕ/09 ದಿನಾಂಕ: 29–12–2010/01–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಸುಳ್ಯದಿಂದ 6.5 ಕಿ.ಮೀ. ಪಶ್ಚಿಮಕ್ಕೆ ಪಾಯಸ್ವಿನಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಿಯಡ್ಕ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸೇರ್ಪಡೆ ಆದೇಶದಲ್ಲಿ, ಆದೇಶ ಭಾಗದ ಮೊದಲನೇ ಕಂಡಿಕೆಯಲ್ಲಿ 'Latitude: 12$^0$34'52'', Longitude: 75$^0$21'10'' ಯನ್ನು ಸೇರ್ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸದರಿ ಯೋಜನೆಯ ಸ್ಥಳದಲ್ಲಿ ಲಭ್ಯವಿರುವ 4.75 ಮೀಟರ್ ಹೆಡ್‌ನ್ನು ಅಳವಡಿಸಿಕೊಂಡು ಹಾಗೂ 127 ಕ್ಯುಮೆಕ್ಸ್ ನೀರಿನ ಹರಿವನ್ನು ಉಪಯೋಗಿಸಿಕೊಂಡು ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 08 ಎನ್‌ಸಿಇ 2011, ಬೆಂಗಳೂರು, ದಿನಾಂಕ : 4ನೇ ಫೆಬ್ರವರಿ 2011.**

ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಸುಳ್ಯದಿಂದ 6.5 ಕಿ.ಮೀ. ಪಶ್ಚಿಮಕ್ಕೆ ಪಾಯಸ್ವಿನಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಗುಂಡಿಯಡ್ಕ ಕಿರು ಜಲ ವಿದ್ಯುತ್ ಯೋಜನೆಯ ('Latitude: 12$^0$34'52'', Longitude: 75$^0$21'10'') ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ..

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ. ಆರ್. 474

## ಇಂಧನ ಸಚಿವಾಲಯ

**ವಿಷಯ :** ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಎನ್‌ಸಿಇ 2008 ದಿನಾಂಕ: 16–07–2009.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–349/ಮಚಡ್ಕ/05 ದಿನಾಂಕ: 29–12–2010/01–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು, ಮಾಚಡ್ಕ ಗ್ರಾಮದ ಬಳಿ ಪಾಯಸ್ವಿನಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಸದರಿ ಯೋಜನೆಯ ಸ್ಥಳದಲ್ಲಿ ಲಭ್ಯವಿರುವ ನೀರಿನ ಎತ್ತರ ಹಾಗೂ ಹರಿವನ್ನು ಉಪಯೋಗಿಸಿಕೊಂಡು ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 12 ಎನ್‌ಸಿಇ 2011, ಬೆಂಗಳೂರು, ದಿನಾಂಕ : 7ನೇ ಫೆಬ್ರವರಿ 2011.**

ಮೆ: ಸಾಯಿ ಲೀಲಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು, ಮಾಚಡ್ಕ ಗ್ರಾಮದ ಬಳಿ ಪಾಯಸ್ವಿನಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ..

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

ಪಿ. ಆರ್. 475

## ENERGY SECRETARIAT
## ADDENDUM

No. EN 429 NCE 2010 Bangalore, Date ; 04-02-2011.

In the corrigendum No: EN 71 EMC-2/2010 Dated; 26. 05. 2010 the following line is added after the second table :-

**"This Corrigendum comes into effect from 26-06-2009"**

By Order and in the name of the Governor of Karnataka,
**Suresh B. Krishnappanavar**
Under Secretary to Government
Energy Department.

P.R. 476

## ಆರ್ಥಿಕ ಸಚಿವಾಲಯ

**ವಿಷಯ** : ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224-ಎ ರಡಿಯಲ್ಲಿ ಸರ್ಕಾರಿ ನೌಕರರು ಹಿಂದೆ ಸಲ್ಲಿಸಿರುವ ಸರ್ಕಾರಿ ಸೇವೆಯನ್ನು ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗೆಗಿನ ಅಧಿಕಾರವನ್ನು ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224-ಬಿ ರಲ್ಲಿ ಸರ್ಕಾರಿ ನೌಕರರು ಹಿಂದೆ ಸಲ್ಲಿಸಿರುವ ಸರ್ಕಾರಿ ಸೇವೆಯನ್ನು ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳ ಬಗ್ಗೆ ವಿವರಿಸಲಾಗಿದೆ. ಈ ನಿಯಮಗಳ ಅನ್ವಯ ಇತರ ಉಪಬಂಧಗಳ ಜೊತೆಗೆ ನಿಯಮ 224-ಎ ರಡಿಯಲ್ಲಿ ಅರ್ಹತಾದಾಯಕ ಸೇವೆಯನ್ನು ಪರಿಗಣಿಸುವ ಬಗೆಗಿನ ಆದೇಶವನ್ನು ಸರ್ಕಾರದ ಅನುಮೋದನೆಯೊಂದಿಗೆ ಹೊರಡಿಸಬೇಕೆಂದು ತಿಳಿಸಲಾಗಿದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224-ಎ ರಡಿಯಲ್ಲಿನ ಪ್ರಸ್ತಾವನೆಗಳನ್ನು ಪರಿಗಣಿಸಿ ಅನುಮೋದನೆ ನೀಡುವ ಅಧಿಕಾರವನ್ನು ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವುದು ಅಗತ್ಯವೆಂದು ಪರಿಗಣಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್ ಡಿ 01 ಎಸ್‌ಆರ್‌ಎ 2011 ಬೆಂಗಳೂರು, ದಿನಾಂಕ 05-03-2011**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224-ಎ ರನ್ವಯ ಸರ್ಕಾರಿ ನೌಕರರು ಹಿಂದೆ ಬೇರೆ ಸರ್ಕಾರಿ ಇಲಾಖೆಗಳಲ್ಲಿ ಸಕ್ರಮವಾಗಿ ಸಲ್ಲಿಸಿದ ಸೇವೆಯನ್ನು ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಅನುಮತಿಸುವ ಅಧಿಕಾರವನ್ನು ಈ ಕೆಳಕಂಡ ಷರತ್ತು, ನಿಬಂಧನೆ ಮತ್ತು ವಿಧಿವಿಧಾನಗಳಿಗೆ ಒಳಪಟ್ಟು ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ.

(1). ದಿ: 01.04.2006ರ ನಂತರ ಹೊಸದಾಗಿ ಸರ್ಕಾರಿ ಸೇವೆಗೆ ಸೇರುವ ನೌಕರರ ಪ್ರಕರಣಗಳಲ್ಲಿ ಕ.ನಾ.ಸೇ.ನಿ.ನಿಯಮ 224-ಎ ರ ಸೌಲಭ್ಯ ಲಭ್ಯವಾಗುವುದಿಲ್ಲ.

(2). ಸರ್ಕಾರಿ ನೌಕರರು ಈ ಹಿಂದೆ ಬೇರೆ ಸರ್ಕಾರಿ ಇಲಾಖೆಗಳಲ್ಲಿ ಸಕ್ರಮವಾಗಿ ನೇಮಕಾತಿ ನಿಯಮಾನುಸಾರ ನೇಮಕಗೊಂಡು ಸಲ್ಲಿಸಿದ ಸೇವೆಯನ್ನು ಮಾತ್ರ ಈ ನಿಯಮಗಳನ್ವಯ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅವಕಾಶವಿದೆ. ಅವರು ದಿನಗೂಲಿ, ಗುತ್ತಿಗೆ, ಅರೆಕಾಲಿಕ ಮತ್ತು ಸ್ಟೈಫಂಡರಿ ಇತ್ಯಾದಿ ತಾತ್ಕಾಲಿಕ ಆಧಾರದ ಮೇಲೆ ಸಲ್ಲಿಸಿದ ಸೇವೆಯನ್ನು ಪರಿಗಣಿಸಲು ಅವಕಾಶವಿಲ್ಲ.

(3). 1970, 1973, 1977 ಮತ್ತು 1986 ರ ವಿಶೇಷ ನಿಯಮಗಳನ್ವಯ ಸೇವಾ ಸಕ್ರಮಗೊಳ್ಳುವ ಪೂರ್ವದಲ್ಲಿ, ಸ್ಥಳೀಯ ಅಭ್ಯರ್ಥಿಗಳಾಗಿ ಹಿಂದೆ ಸಲ್ಲಿಸಿರುವ ಸೇವೆಯನ್ನು ಅವರು ವಾಸ್ತವವಾಗಿ ಸ್ಥಳೀಯ ಅಭ್ಯರ್ಥಿಯಾಗಿ ಸಲ್ಲಿಸಿದ ಸೇವೆಯನ್ನು ವಿಶೇಷ ನಿಯಮಾವಳಿಯಲ್ಲಿ, ಈ ಉದ್ದೇಶಕ್ಕಾಗಿ ಕಲ್ಪಿಸಿರುವ ಅವಕಾಶಗಳನ್ನು ಗಮನದಲ್ಲಿರಿಸಿ, ಅರ್ಹತಾದಾಯಕ ಸೇವೆಯೆಂದು ಪರಿಗಣಿಸಬಹುದು.

(4). ಸರ್ಕಾರಿ ನೌಕರರು ಸರ್ಕಾರಿ ಸೇವೆಗೆ ಸೇರುವ ಪೂರ್ವದಲ್ಲಿ ಸ್ಥಳಿಯ ಸಂಸ್ಥೆಗಳು, ಸ್ವಾಯತ್ತ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಸಲ್ಲಿಸಿದ ಪಿಂಚಣಿಯುಕ್ತ ಸೇವೆಯನ್ನು ಈ ನಿಯಮಗಳಡಿಯಲ್ಲಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅವಕಾಶವಿಲ್ಲ. ಆದಾಗ್ಯೂ, ಅರ್ಹತೆಯನುಸಾರ ಸಂಬಂಧಪಟ್ಟ ನಿಯಮಗಳನ್ವಯ ಪರಿಶೀಲಿಸಿ ಆರ್ಥಿಕ ಇಲಾಖೆಯ ಅನುಮೋದನೆ ಪಡೆಯಬಹುದು.

(5). ಸರ್ಕಾರಿ ನೌಕರರು ಈ ನಿಯಮದ ಸೌಲಭ್ಯವನ್ನು ಪಡೆಯಲು ಕ.ನಾ.ಸೇ.ನಿ. ನಿಯಮ 224-ಬಿ ಜಾರಿಗೆ ಬಂದ ಐದು ವರ್ಷದೊಳಗೆ ಬೇರೊಂದು ಸರ್ಕಾರಿ ಸೇವೆಗೆ ನೇಮಕಾತಿ ನಿಯಮಾನುಸಾರ ಆಯ್ಕೆಗೊಂಡು ನೇಮಕ ಹೊಂದಿದಲ್ಲಿ, ಹಾಗೆ ನೇಮಕ ಹೊಂದಿದ ದಿನಾಂಕದಿಂದ ಮೂರು ವರ್ಷಗಳೊಳಗೆ ಅರ್ಜಿಯನ್ನು ಸಲ್ಲಿಸಬೇಕು. ತಡವಾಗಿ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲು ಅವಕಾಶವಿಲ್ಲ.

(6). ಅರ್ಹತಾದಾಯಕ ಸೇವೆಯೆಂದು ಈ ನಿಯಮಗಳಡಿ ಪರಿಶೀಲಿಸುವಲ್ಲಿ ಸರ್ಕಾರಿ ನೌಕರರು ಈ ಹಿಂದೆ ಸಲ್ಲಿಸಿದ ಸೇವೆಗೆ ಸಂಬಂಧಪಟ್ಟ ಮೂಲ ಸೇವಾ ಪುಸ್ತಕಗಳ ಆಧಾರದ ಮೇಲೆ ಮಾತ್ರ ಪರಿಗಣಿಸಬೇಕು. ಸೇವಾ ಪ್ರಮಾಣಪತ್ರದ ಆಧಾರದ ಮೇಲೆ ಪರಿಗಣಿಸಲು ಅವಕಾಶವಿಲ್ಲ.

(7). ಬೇರೊಂದು ಸರ್ಕಾರಿ ಸೇವೆಯನ್ನು ಕೈಗೊಳ್ಳುವ ನೌಕರರ ಪ್ರಕರಣಗಳಲ್ಲಿ ಹಿಂದಿನ ಸರ್ಕಾರಿ ಸೇವೆಯನ್ನು ಈ ಉದ್ದೇಶಕ್ಕಾಗಿ ಪರಿಗಣಿಸಬೇಕಾಗುವಲ್ಲಿ, ಸರ್ಕಾರಿ ನೌಕರರು ಹೊಸ ಸರ್ಕಾರಿ ಹುದ್ದೆಯನ್ನು ಸೇರುವ ಪೂರ್ವದಲ್ಲಿ ಸಕ್ಷಮ ಪ್ರಾಧಿಕಾರದ ಮೂಲಕ ಅರ್ಜಿಯನ್ನು ಸಲ್ಲಿಸಿರಬೇಕು ಮತ್ತು ಹೊಸ ಹುದ್ದೆಯನ್ನು ಸೇರುವ ಉದ್ದೇಶಕ್ಕಾಗಿಯೇ ಆ ಇಲಾಖೆಯಿಂದ ಬಿಡುಗಡೆ ಹೊಂದಿರಬೇಕು. ಒಂದು ವೇಳೆ ಅವರು ಸರ್ಕಾರಿ ಸೇವೆಗೆ ಸೇರುವ ಪೂರ್ವದಲ್ಲಿ ಅರ್ಜಿ ಸಲ್ಲಿಸಿ ಮತ್ತೊಂದು ಸರ್ಕಾರಿ ಹುದ್ದೆಗೆ ಆಯ್ಕೆ ಹೊಂದಿರುವಲ್ಲಿ ಸಕ್ಷಮ ಪ್ರಾಧಿಕಾರದ ಮೂಲಕ ಈ ಉದ್ದೇಶಕ್ಕಾಗಿ ಬಿಡುಗಡೆ ಹೊಂದಿರಬೇಕು. ಕ.ನಾ.ಸೇ.ನಿ. ನಿಯಮ 252-ಬಿ ರನ್ವಯ ತಾಂತ್ರಿಕ ರಾಜೀನಾಮೆ ನೀಡಿದ ಪ್ರಕರಣಗಳಲ್ಲಿಯೂ ಈ ಸೌಲಭ್ಯ ಪರಿಗಣಿಸಬಹುದು.

(8). ಹೊಸ ಹುದ್ದೆಗೆ ಹಾಜರಾಗುವಲ್ಲಿ ಕ.ನಾ.ಸೇ.ನಿ.ನಿಯಮ 76(6)ನ್ನು, ನಿಯಮ 78ರೊಂದಿಗೆ ಓದಿಕೊಂಡ ರೀತ್ಯ ಲಭ್ಯವಾಗುವ ಸೇರಿಕೆ ಕಾಲವನ್ನು ಮೀರಿ, ಹೆಚ್ಚುವರಿ ಅವಧಿಯನ್ನು ಉಪಯೋಗಿಸಿಕೊಂಡಿರುವ ನೌಕರರ ಪ್ರಕರಣಗಳಲ್ಲಿ ಸೇವಾ ವಿಚ್ಛಿನ್ನತೆಯನ್ನು ಮನ್ನಾ ಮಾಡಲು ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ಅವರ ಹಿಂದಿನ ಸಕ್ರಮ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗದು.

(9). ಈ ನಿಯಮದನ್ವಯ ಹಿಂದಿನ ಸೇವೆಗಳಿಗೆ ಸಂಬಂಧಿಸಿದ ಅರ್ಹತಾದಾಯಕ ಸೇವೆಯನ್ನು ಲೆಕ್ಕಹಾಕುವಾಗ ಸರ್ಕಾರಿ ನೌಕರರ ಸೇವೆಯ ಅವಧಿಯಲ್ಲಿ ಪರಿಗಣಿಸಲಾದ ಯಾವುದೇ "ಲೆಕ್ಕಕ್ಕಿಲ್ಲದ ಅವಧಿ"ಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲಾಗದು.

2. ಸರ್ಕಾರಿ ನೌಕರರು ನಿಗದಿತ ಅವಧಿಯೊಳಗೆ ಸಲ್ಲಿಸುವ ಕೋರಿಕೆಯನ್ನು ಇಲಾಖಾ ಮುಖ್ಯಸ್ಥರು ನಿಯಮಾನುಸಾರ ಪರಿಶೀಲಿಸಿ, ಅರ್ಹ ಪ್ರಕರಣಗಳನ್ನು ಮಾತ್ರ ಸರ್ಕಾರದ ಕಾರ್ಯದರ್ಶಿಗಳ ಅನುಮೋದನೆಗಾಗಿ ಸಲ್ಲಿಸುವುದು. ಸರ್ಕಾರದ ಕಾರ್ಯದರ್ಶಿಗಳು ನಿಯಮಗಳ ಎಲ್ಲಾ ಷರತ್ತುಗಳು ಪೂರೈಕೆಯಾಗಿರುವುದನ್ನು ಖಚಿತಪಡಿಸಿಕೊಂಡು, ಸರ್ಕಾರಿ ನೌಕರರು ಈ ಹಿಂದೆ ಬೇರೊಂದು ಸರ್ಕಾರಿ ಇಲಾಖೆಯಲ್ಲಿ ಸಲ್ಲಿಸಿದ ಸಕ್ರಮ ಸೇವೆಯನ್ನು ಕ.ನಾ.ಸೇ.ನಿ.ನಿಯಮ 224-ಎ ರನ್ವಯ ಪಿಂಚಣಿ ಉದ್ದೇಶಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅನುಮೋದಿಸತಕ್ಕದ್ದು.

3. ಯಾವ ಯಾವ ಇಲಾಖೆಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು ಇದ್ದಾರೋ ಅಂತಹ ಇಲಾಖೆಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರಿಂದ ನಿಯಮಗಳ ಪೂರೈಕೆಯ ಬಗ್ಗೆ ಅಭಿಪ್ರಾಯ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾರಾಯಣ**

ಪಿ.ಆರ್ 857

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ(ಸೇವೆಗಳು-1)